


# ಸಪ್ತಗಿರಿ

ಜುಲೈ 85

ಬೆಲೆ: ರೂ ೧

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಉತ್ಸವದ ಆರಂಭದ ಮೆರವಣಿಗೆ.



ಶ್ರೀನಿವಾಸ ಮಂಗಾಪುರದ ಆಲಯ ಉತ್ಸವ ಮೂರ್ತಿಗಳೊಡನೆ
ಅನ್ನಮಾಚಾರ್ಯ ವಿಗ್ರಹ.

# ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ
# ಸಂಗೀತೋತ್ಸವ
## ೫-೫-೮೫ ರಿಂದ ೯-೫-೮೫



ಸಂಗೀತೋತ್ಸವದ ಉದ್ಘಾಟನೆ.



ಅನ್ನಮಾಚಾರ್ಯ ವಿಗ್ರಹಾರಾಧನೆಯಲ್ಲಿ ಶ್ರೀ ಎಸ್. ಯತಿರಾಜಾರಾವ್





ಏವಂ ಶ್ರುತಿಮತ ಮಿದ ಮೇವ ತ–
ದ್ಭಾವಯಿತು ಮತಃಪರಂ ನಾಸ್ತಿ ॥ಪ॥

ಅತುಲ ಜನ್ಮ ಭೋಗಾಸಕ್ತಾನಾಂ
ಹಿತ ವೈಭವ ಸುಖಮಿದ ಮೇವ
ಸತತಂ ಶ್ರೀಹರಿ ಸಂಕೀರ್ತನಂ ತ–
ದ್ವ್ಯತಿರಿಕ್ತ ಸುಖಂ ವಕ್ತುಂ ನಾಸ್ತಿ 1

ಬಹುಳ ಮರಣ ಪರಿಭವ ಚಿತ್ತಾನಾ–
ಮಿಹಪರ ಸಾಧನ ಮಿದ ಮೇವ
ಅಹಿಶಯನ ಮನೋಹರ ಸೇವಾ ತ–
ದ್ವಿಹರಣಂ ವಿನಾ ವಿಧಿ ರಪಿ ನಾಸ್ತಿ 2

ಸಂಸಾರ ದುರಿತ ಜಾಡ್ಯ ಪರಾಣಾಂ
ಹಿಂಸಾ ವಿರಹಿತ ಮಿದ ಮೇವ
ಕಂಸಾಂತಕ ವೇಂಕಟಗಿರಿ ಪತೇಃ ಪ್ರ
ಶಂಸೈ ವ ಪಶ್ಚಾ ದಿಹ ನಾಸ್ತಿ 3

—ಶ್ರೀ ಅನ್ನಮಾಚಾರ್ಯ

# ಓದುಗರ ಓಲೆ

ಮಾನ್ಯರೆ;

ಏಪ್ರಿಲ್ ಪತ್ರಿಕೆಯು ಸಕಾಲಕ್ಕೆ ತಲುಪಿದೆಯಲ್ಲದೆ ಬಹಳ ಸುಂದರವಾಗಿದೆ. ನನಗೆ ಈ ಸಂಚಿಕೆಯ ಕಿಶೋರ ಜಗತ್‌ನ 'ಮಹರ್ಷಿ ಅತ್ರಿ' ಬಹಳ ಉಪಕಾರ ಮಾಡಿತು. ಅದು ಅತ್ರಿಗಳ ಬಗ್ಗೆ ತಿಳಿದು ಕೊಳ್ಳಲು ಉಪಕಾರ ಮಾಡಿದೆ. 'ಶರಣು' ಕೂಡ ಚೆನ್ನಾಗಿದೆ.

ಸಿ. ಎಲ್. ಗೌರೀಶಂಕರ್
ಬೆಂಗಳೂರು.

ಮಾನ್ಯರೆ;

ಏಪ್ರಿಲ್ ಸಂಚಿಕೆಯ ಮುಖಚಿತ್ರ ತುಂಬ ಮುದ್ದಾಗಿದೆ. ನೋಡಿದ ಕೂಡಲೇ ಭಕ್ತಿ ಭಾವವನ್ನುಂಟು ಮಾಡುವಂತೆ ಇರುವ ಶ್ರೀರಾಮಾನುಜಾಚಾರ್ಯರ ಚಿತ್ರವನ್ನು ಬಿಡಿಸಿದ ಶ್ರೀ ಕೆ. ಜಗದೀಶ್ ಅವರಿಗೂ ಕಾಲೋಚಿತವಾಗಿ ಪ್ರಕಟಿಸಿದ ನಿಮಗೂ ಧನ್ಯವಾದಗಳು. ಹೀಗಿಯೇ ಶ್ರೀಶಂಕರಾಚಾರ್ಯ ಹಾಗೂ ಶ್ರೀ ಮಧ್ವಾಚಾರ್ಯರ ಚಿತ್ರಗಳನ್ನೂ ಆಯಾ ಸಂದರ್ಭಗಳಲ್ಲಿ ಮುಖಪುಟವನ್ನಾಗಿಸಿದಲ್ಲಿ ಎಲ್ಲರ ಮನ್ನಣೆ ದೊರೆಯುವಲ್ಲಿ ಸಂದೇಹವಿಲ್ಲ

ನರಸಿಂಹಸ್ವಾಮಿ
ಬೆಂಗಳೂರು.

ಮಾನ್ಯರೆ;

ಶ್ರೀನಿವಾಸ ಮಠದರ ಅಂಬಿಗ ನಾನಿನ್ನ ನಂಬಿದೆ (ಜೂನ್ 85) ತುಸು ಹೆಚ್ಚಾಯಿತೇನೋ. ಕನಕದಾಸರ ಮುಂಡಿಗೆಗಳನ್ನೂ ಇದೇ ರೀತಿಯಲ್ಲಿ ವ್ಯಾಖ್ಯಾನಿಸಿದಲ್ಲಿ ಉಪಕಾರವಾಗುತ್ತದೆ.

ರಾಮಯ್ಯ
ಚಿತ್ರದುರ್ಗ.

ಮಾನ್ಯರೆ;

ಶೇಕ್ ಮೌಲಾಲಿಯವರು ಬರೆದ ಅಯೋಧ್ಯೆಯನ್ನು ಪ್ರಕಟಿಸಿದ ಜೂನ್ 85 ರ ಸಂಚಿಕೆ ತಲುಪಿದೆ. ಲೇಖನ ಸುಂದರವಾಗಿದೆ. ತಕ್ಕ ಚಿತ್ರಗಳಿಂದ ಶೋಭೆ ಹೆಚ್ಚಿದೆ. ಹೀಗೆಯೇ ಮುಂದೆ ಮುಂದೆ ಇತಿಹಾಸ ಪುರಾಣ ಪುರುಷರ ಜನ್ಮಸ್ಥಳಗಳನ್ನು ಪರಿಚಯ ಮಾಡಿ ಕೊಡುವಂತಾಗಲಿ.

ಚಿನ್ನಣ್ಣ
ತುಮಕೂರು.

ಸ್ವಾಮಿ;

ಜೂನ್ 85 ರಲ್ಲಿನ ಶಂಕರಾಚಾರ್ಯರ ಬಗೆಗಿನ, ಕರ್ನಾಟಕ ಸಂಗೀತದ ಬಗೆಗಿನ ಲೇಖನಗಳು ಸಂತೋಷಗೊಳಿಸಿದವು. ಲೇಖಕರಿಗೂ ತಮಗೂ ಆದರಕ್ಕಾಗಿ ವಂದಿಸುವೆ.

ಶಂಕರನಾರಾಯಣ
ರಾಯಚೂರು.

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6–30, ಬೆಳಗ್ಗೆ 10–30, ಸಂಜೆ 4–30

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**



ಸಂಪುಟ ೧೬] ಜುಲೈ ೧೯೮೫ [ಸಂಚಿಕೆ ೨



ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

# ವಿಷಯಸೂಚಿ



ಮುಖ ಚಿತ್ರ : ಶ್ರೀವೆಂಕಟೇಶ್ವಸ್ವಾಮಿಯ ಆರಾಧನೆಯಲ್ಲಿ ವಾಗ್ಗೇಯಕಾರರು
ಚಿತ್ರ : ಶ್ರೀ ಬಾಪು

ಹಿಂಬದಿಯಲ್ಲಿ : ಶ್ರೀವೆಂಕಟೇಶ್ವರಅನ್ನಮಾಚಾರ್ಯಸಂಗೀತೋತ್ಸವದ ಜನಸಮೂಹ




ಭಾಷೆ ಹೇಗೆ ಹುಟ್ಟಿತು ಎನ್ನುವ ಪ್ರಶ್ನೆಗೆ ಬಹುವಿಧಗಳ ಉತ್ತರಗಳುಂಟಾಗಿವೆ. ಅವುಗಳಲ್ಲಿ ಮುಖ್ಯವಾದದ್ದು ಎಂದರೆ ಆದಿಮಾನವನ ಅಸ್ಪಷ್ಟ ಸ್ವರಸಂಕೇತಗಳೇ ಭಾಷೆಗೆ ಮೂಲವೆಂದೂ ಅದೇ ಬೆಳೆದು ಬೆಳೆದು ಕೊನೆಗೆ ಹೀಗೆ ತಯಾರಾಗಿದೆಯೆಂಬುದು. ನಂತರ ವಾದಗಳೆಂಬುವು ಹೊರಟವು ಇಂತಹ ವಾದವೇ ಸಂಸ್ಕೃತ ವ್ಯಾಕರಣದ ಬಗ್ಗೆಯೂ ಇದೆ. ಪಾಣಿನೀಯದಲ್ಲಿ ಮಹೇಶ್ವರ ಸೂತ್ರಗಳು ಪರಮಶಿವ ಡಮರುಕ ನಾದ ಬೋಧೆಯೆಂದರು. ಇದು ಹೀಗಿರುವಲ್ಲಿ ಸಂಗೀತಶಾಸ್ತ್ರ ಸೋಪಾನಗಳು – ಸರಿಗಮಪದನಿಸ – ಗಳು ಸರಸ ಜೀವಜಾಲ ಸಂಭೂತಗಳೆಂದು ಶಾಸ್ತ್ರಜ್ಞರು ಹೇಳುತ್ತಾರೆ.

ಇವುಗಳೆಲ್ಲವನ್ನೂ ಗಮನಿಸಿದಾಗ ಆದಿಮ ಜೀವಜಾಲ ಸ್ವರಸಂಕೇತ ವಿಧಾನದಿಂದ ಕಾಲಾಂತರದಲ್ಲಿ ಬಹುಭಾಷೆಗಳುಂಟಾದುವೆಂದು ಹೇಳಬಹುದು. ನಿಜವೆಂದರೆ ಭಾಷೆಗಳಿಂದಲೇ ಬಾಧೆಗಳು ಹೆಚ್ಚಿದವೇನೋ ಅನ್ನಿಸುತ್ತದೆ. ಭಾಷಾಭಿವೃದ್ಧಿಯ ಹೆಸರಿನಲ್ಲಿ ಹಲವು ಸಮಸ್ಯೆಗಳಿಂದ ದ್ವೇಷಾಭಿವೃದ್ಧಿ ಮಾತ್ರವೇ ಆಗುತ್ತಿದೆ. ಮನ ಮೂಗಬಾಧೆಯಿಂದ ತೊಳಲುತ್ತಿದ್ದರೆ ಮನುಷ್ಯ ಮನುಷ್ಯರ ನಡುವೆ ಮದಮಾತ್ಸರ್ಯಗಳ ಅಡ್ಡಗೋಡೆಗಳು ಅವಗಾಹನೆಗೆ ಅವರೋಧಗಳಾಗುತ್ತಿವೆ. ಇದೊಂದು ದುಃಸ್ವಪ್ನ.

ಆದರೆ ನಾದಶರೀರನೂ ಸರ್ವಲೋಕಶಂಕರನೂ ಆದ ಪರಬ್ರಹ್ಮನಿಂದ ಎಲ್ಲ ರೀತಿಯ ಚರಾಚರ ವಿಶ್ವವುಂಟಾಯಿತೆಂದೂ, ಹಾಗೆ ಆವಿರ್ಭವಿಸಿದ ಆ ಆದಿಮ ಜೀವಲೋಕದ ಕಲಕಲದ, ಕಲವರದ ಸಂಕೇತ ಸ್ವರಗಳು ಸರ್ವಜನಸಂವೇದ್ಯಮೃದುನಾದಶಾಸ್ತ್ರವಾಯಿತೆಂದೂ, ಸಾಮಾಜಿಕ ವೈಯುಕ್ತಿಕ ವಿಕೃತಿಗಳನ್ನು ಅನುಸರಿಸಿ ವಿವಿಧ ಭಾಷೆಗಳು ರೂಪ ಪಡೆದವೆಂದೂ ತಿಳಿದಲ್ಲಿ ಮಾನವತಾಶೀತಕರನಿಗೆ ಭಾಷಾ ದ್ವೇಷಾದಿ ರೂಪಗ್ರಹಣ ತಪ್ಪುತ್ತದೆ.

ಹಲವು ದೇಶಗಳಲ್ಲಿ ಹಲವು ರೂಪಗಳಲ್ಲಿ ಕಂಡುಬರುವ ಆ ಆದಿಮ ಸ್ವರಧಾರೆ ಸರ್ವಕಾಲ ಸರ್ವಜನ ಹೃದಯೈಕವೇದ್ಯವಾಗಿದ್ದು, ಆ ಪಾರಮಾತ್ಮಿಕ ಸ್ವರಾವಧಾನದಲ್ಲಿ ದೇಶಭಾಷಾ ವರ್ಗವರ್ಣ ಭೇದಗಳಿಲ್ಲ. ಆತ್ಮ ತತ್ತ್ವಾರಾಧನೆಗೆ ಎಲ್ಲರೂ ಅರ್ಹರೆ. ವೈವಿಧ್ಯಮಯವಾದ ಭಾರತೀಯ ಮಣಿಹಾರದಲ್ಲಿ ಪರಂಪರೆಯಿಂದ ಏಕಸೂತ್ರವಾಗಿ ನಡೆದು ಬಂದಿರುವುದು ಈ ಆಧ್ಯಾತ್ಮಿಕ ಕಲಾರಾಧನೆಯೇ.

ಈ ಮಹತ್ತರವಾದ ಸತ್ಯ ಇಚೆಗೆ ತಿ.ತಿ.ದೇ. ನಿರ್ವಹಿಸಿದ ಅನ್ನಮಾಚಾರ್ಯ ಜಯಂತಿ ಉತ್ಸವಗಳಲ್ಲಿ ಮತ್ತಷ್ಟು ಸ್ಪಷ್ಟವಾಯಿತು. ಪದಕವಿತಾ ಪಿತಾಮಹನ ಸಂಸ್ಮರಣೆಯಲ್ಲಿ ಈ ವರ್ಷ ತಿ.ತಿ.ದೇ. ಗಳು ರಾಷ್ಟ್ರೀಯ ಸಂಗೀತೋತ್ಸವವನ್ನು ಏರ್ಪಡಿಸಿದ್ದವು. ಹಲವು ಭಾಷೆಗಳ ಹಲವು ಧರ್ಮಗಳ ಕಲೆಗಾರರು ಈ ಅಪೂರ್ವ ಉತ್ಸವದಲ್ಲಿ ಭಾಗವಹಿಸಿ ರಸಮಯ ಜಗತ್ತಿನಲ್ಲಿ ವಿರಸಕ್ಕೆ ತಾವಿಲ್ಲವೆಂದು ನಿರೂಪಿಸಿದರು. ಅನ್ನಮಾಚಾರ್ಯರೊಂದಿಗೆ, ತ್ಯಾಗರಾಜ, ಶ್ಯಾಮಾಶಾಸ್ತ್ರಿ, ಮುತ್ತುಸ್ವಾಮಿ ದೀಕ್ಷಿತರು, ಪುರಂದರದಾಸ, ತುಲಸೀದಾಸ, ಮೀರಾಬಾಯಿ ಮೊದಲಾದ ಭಕ್ತ ವಾಗ್ಗೇಯಕಾರರಿಗೆ ಅಗ್ರ ಪೀಠಗಳನ್ನು ನೀಡಲಾಯಿತು. ವೈಧರ್ಮೀಯ ಕಲಾವೈದುಷ್ಯದೊಂದಿಗೆ ವಿದೇಶೀಯ ಯಂತ್ರ ವಾದ್ಯ ವಿದ್ವತ್ತು ಸಹ ಜಗದೇಕಪತಿಯನ್ನು ಕೊಂಡಾಡಿ ಜೈಕಾರ ಹಾಕಿತು.

ಎಂತಲೇ ನಿನ್ನೆ ನಡೆದದ್ದು ಪದಕವಿತಾ ಪಿತಾಮಹನ ಜಯಂತಿ ಮಾತ್ರವಲ್ಲ, ಅನಂತ ಆಧ್ಯಾತ್ಮಿಕತಾ ಪ್ರತಿಮೂರ್ತಿಗಳಿಗೆ ದೇಶ ಸಮರ್ಪಿಸಿದ ಆನಂದ ನೀರಾಜನ.

ಸಾಂಸ್ಕೃತಿಕ ಏಕತಾಯಜ್ಞಕ್ಕೆ ಅನ್ನಮಯ್ಯ ಜಯಂತಿ ಆರಂಭಮಾತ್ರವೇ. ಪದಕವಿತಾ ಗುರು ಪೂಜೆ–ಪರಮಗುರು ಪೂಜೆ–ಹೀಗೆಯೇ ಇತೋಪ್ಯತಿಶಯವಾಗಿ ಸಾಗಲೆಂದು ಶ್ರೀ ವೆಂಕಟೇಶ್ವರನಲ್ಲಿ ಬೇಡುವ.

# ಶ್ರೀ ಯಾಮುನಾಚಾರ್ಯರ ಸ್ತೋತ್ರ ರತ್ನ

ಶ್ರೀ ಯಮುನಾಚಾರ್ಯರು ವಿಶಿಷ್ಟಾದ್ವೈತ ಮತವನ್ನು ಸರ್ವತೋಮುಖವಾಗಿ ಹರಡಲು ಯತ್ನಿಸಿದವರಲ್ಲಿ ಪ್ರಥಮ ಆಚಾರ್ಯರು, ಶ್ರೀ ರಾಮಾನುಜಾಚಾರ್ಯರ ಪರಮ ಗುರುಗಳು. ಕ್ರಿ. ಶ. ೧೧ ನೆಯ ಶತಮಾನದಲ್ಲಿ ಮೆರೆದ ಭಕ್ತ ಶಿರೋಮಣಿ ಇವರು. ಇವರು ರಚಿಸಿದ "ಸಿದ್ಧಿತ್ರಯ, ಗೀತಾರ್ಥಸಂಗ್ರಹ, ಸ್ತೋತ್ರರತ್ನ ಮುಂತಾದ ಅಪೂರ್ವ ಗ್ರಂಥಗಳು ಪಂಡಿತ ಪಾಮರನ್ನು ಮೆಚ್ಚಿಸಿವೆ. ಬಾಲ್ಯದಲ್ಲೇ ಇವರಲ್ಲಿ ಕವಿತಾ ಧೋರಣೆ ಬೇರೂರಿತ್ತು. ಇವರ ಗ್ರಂಥಗಳಲ್ಲಿ ಶಬ್ದ ಸೌಷ್ಟವ, ಪ್ರತಿಭೆಯ ಸಂಪತ್ತು, ತತ್ತ್ವವನ್ನು ಹೇಳುವ ಜಾಣ್ಮೆ, ಪಾಂಡಿತ್ಯ ಪ್ರದರ್ಶನದ ವಿನ್ಯಾಸ, ಮಿಗಿಲಾಗಿ ಈಶ್ವರನಲ್ಲಿ ತೋರುವ ನಿರ್ಹೇತುಕ ಪ್ರೇಮಪ್ರವಾಹ ಅಪಾರವಾಗಿವೆ. ಭಗವತ್ಸೇವೆಯಲ್ಲಿ ತಮ್ಮ ಇಹಲೋಕದ ಜೀವನವನ್ನು ಕಳೆದು ಧನ್ಯರಾದ ನಾಥಮುನಿಗಳು ಇವರ ಪಿತಾಮಹರು. ಯಮುನಾಚಾರ್ಯರ ಜನನ ಮಧುರೆ ಜಿಲ್ಲೆಯಲ್ಲಿ, ಈಶ್ವರಾನುಗ್ರಹದಿಂದ ಇವರಿಗೆ ೧೦ ನೆಯ ವಯಸ್ಸಿನಲ್ಲಿ ಭಾಷ್ಯಾಚಾರ್ಯರೆಂಬ ಗುರುಗಳು ದೊರಕಿದರು. ಆ ಗುರುಗಳ ಅನುಗ್ರಹದಿಂದ ಎಲ್ಲ ವೇದ ಉಪನಿಷತ್ತುಗಳನ್ನು ಮನನ ಮಾಡಿದರು. ಹುಟ್ಟುಗುಣವಾಗಿ ತಮ್ಮಲ್ಲಿ ನೆಲೆಸಿದ್ದ ಭಕ್ತಿ ಜ್ಞಾನಕ್ಕೆ ಗುರು ಕೃಪೆಯೂ ಒದಗಿ ಬಂತು. ಇವರ ಸುಪ್ತಜ್ಞಾನ ಲೋಕಕ್ಕೆ ತಿಳಿಯುವ ಸುಯೋಗವೂ ಒದಗಿ ಬಂತು. ಆಗ್ಗೆ ಪಾಂಡ್ಯರಾಜ್ಯದಲ್ಲಿ ವೀರಮಣಿಯೆಂಬ ಧರ್ಮಿಷ್ಟನಾದ ರಾಜ ರಾಜ್ಯವಾಳುತ್ತಿದ್ದನು, ಆತನಿಗೆ ತಕ್ಕಂತಹ ಸದ್ಗುಣಿಯಾದ ಹೆಂಡತಿ ವಿದ್ಯಾವತಿ. ಕೋಲಾಹಲನೆಂಬ ಪಂಡಿತ ಗುರು ಅವನ ಆಸ್ಥಾನದಲ್ಲಿ ಮೆರೆಯುತ್ತಿದ್ದನು. ಆಕಾಲದಲ್ಲಿ ವಾಗ್ವಾದದಲ್ಲಿ ಗೆದ್ದ ಪಂಡಿತ ಗುರುವಿಗೆ, ಸೋತ ಪಂಡಿತರು ಗೌರವ ಧನವನ್ನು ಪ್ರತಿವರ್ಷವೂ ಅರ್ಪಿಸಬೇಕಾಗಿತ್ತು. ಒಂದು ದಿನ ಭಾಷ್ಯಾಚಾರ್ಯರು ಆಶ್ರಮದಲ್ಲಿರಲಿಲ್ಲ. ಕೋಲಾಹಲನ ಕಡೆಯವರು ಗೌರವಧನವನ್ನು ವಸೂಲಿ ಮಾಡಲು ಆಶ್ರಮಕ್ಕೆ ಬಂದರು. ಇದನ್ನು ಕೇಳಿದ ಯಾಮುನಾಚಾರ್ಯರು ಕೋಪಗೊಂಡು ತಮ್ಮನ್ನು ವಾದದಲ್ಲಿ ಸೋಲಿಸುವವರೆಗೂ ಗೌರವ ಧನವನ್ನು ನೀಡುವುದಿಲ್ಲವೆಂದು ಹೇಳಿ ಕಳುಹಿಸಿದರು. ಇದನ್ನು ಕೇಳಿದ ಕೋಲಾಹಲನು ಕುಪಿತನಾಗಿ ನಡೆದ ಸಂಗತಿಯನ್ನು ರಾಜನಾದ ವೀರಮಣಿಗೆ ತಿಳಿಸಲು, ರಾಣಿಯ ಆದೇಶದಂತೆ ಕೋಲಾಹಲನಿಗೂ ಯಮುನಾಚಾರ್ಯರಿಗೂ ವಾಗ್ಯುದ್ಧ ನಡೆಯುವಂತೆ ಸಭೆಯನ್ನು ಕರೆದರು. ಒಬ್ಬ ಬಾಲಕನಿಗೂ, ಒಬ್ಬ ದೊಡ್ಡ ಪಂಡಿತರಾಜನಿಗೂ ವಾಗ್ವಾದ ನಡೆಯುವುದನ್ನು ಕೇಳಿ ಎಲ್ಲರೂ ಆಸ್ಥಾನದಲ್ಲಿ ಸೇರಿದರು. ಯಾಮುನರ ಮುಖವರ್ಚಸನ್ನು ಕಂಡು ರಾಣಿ ವಿದ್ಯಾವತಿ ಕೋಲಾಹಲರು ಸೋತರೆ ಮಧುರೆ ಜಿಲ್ಲೆಯ ಒಂದು ಸಂಸ್ಥಾನಕ್ಕೆ ಯಾಮುನರನ್ನು ಅಧಿಪತಿಯನ್ನಾಗಿ ನೇಮಿಸುವೆನೆಂತಲೂ ಪ್ರತಿಜ್ಞೆ ಮಾಡಿದಳು. ಯಾಮುನರು ವಿನೀತಭಾವದೊಡನೆ ಕೋಲಾಹಲರನ್ನು ಕುರಿತು ಅವರ ಇಚ್ಛೆಯಂತೆ ತಾವು ಮೂರು ಪ್ರಶ್ನೆಗಳನ್ನು ಹಾಕುವುದಾಗಿಯೂ ಅವುಗಳನ್ನು ನಿರಾಕರಿಸುವುದು ಪ್ರತಿಪಕ್ಷಿಯ ಧರ್ಮವೆಂತಲೂ ತಿಳಿಸಿ, ಮೊದಲನೆಯದಾಗಿ 'ಕೋಲಾಹಲರ ತಾಯಿ ಬಂಜೆಯಲ್ಲ' ಎಂದರು. ಇವನ್ನು ನಿರಾಕರಿಸಬೇಕು ಅಂದರೆ ಕೋಲಾಹಲರ ತಾಯಿ ಬಂಜೆ ಎಂಬುದಾಗಿ ಪ್ರತಿಪಾದಿಸಬೇಕು. ಎರಡನೆಯದಾಗಿ 'ರಾಜನು ಧರ್ಮಾತ್ಮ' ಇದನ್ನು ನಿರಾಕರಿಸಬೇಕು. ಮೂರನೆಯದಾಗಿ 'ರಾಣಿಯು ಪತಿವ್ರತೆ' ಅಂದರೆ ರಾಣಿಯು ಪತಿವ್ರತೆಯಲ್ಲ ಎಂಬುದಾಗಿ ಸ್ಪಷ್ಟ ಪಡಿಸಬೇಕು. ಈ ಮೂರು ವಿಷಯಗಳನ್ನು ಕೊಲಾಹಲರು ನಿರಾಕರಿಸಿದರೆ ತಾವು ಅವರ ಊಳಿಗವನ್ನು ಮಾಡುವುದಾಗಿ ಬಾಲಕ ಯಾಮುನರು ಸವಾಲು ಹಾಕಿದರು. ಇವರ ಒಗಟನ್ನು ಕಂಡ ಪಂಡಿತ ಪಾಮರರು ಮೂಕರಾದರು. ಕೋಲಾಹಲರು ಈ ಸಮಸ್ಯೆಯನ್ನು ಬಿಡಿಸಲಾರದೆ ಹೋದರು. ವಿದ್ಯಾವತಿಗೆ ಉತ್ತರಗಳನ್ನು ಕೇಳುವ ತವಕ, ಬಯಕೆ. ಅನುಭವವೇದ್ಯವಾದ ಸಂತೋಷ. ವಿದ್ಯಾವತಿಯ ಆದೇಶದಂತೆ ಯಾಮುನರು ಸ್ವತಃ ತಾವೇ ತಮ್ಮ ವಾದವನ್ನು ಮುಂದುವರಿಸಿದರು.

ಒಬ್ಬ ಮಗ ಮಗನಲ್ಲವೆಂಬ ಶಾಸ್ತ್ರದ ಆಧಾರದಿಂದ ಕೋಲಾಹಲನ ತಾಯಿ ಒಬ್ಬ ಮಗನನ್ನು ಹೊಂದಿದ್ದರೂ ಬಂಜೆಯೆಂದೇ ಲೆಕ್ಕ. ನಮ್ಮ ರಾಜನು ಮಹಾ ಪುಣ್ಯಾತ್ಮ. ಅವನು ಹೇಗೆ ಪಾಪಾತ್ಮನಾಗುತ್ತಾನೆ ಎಂದರೆ "ರಾಜಾ ರಾಷ್ಟ್ರ ಕೃತಂ ಪಾಪಂ" ಎಂಬುವಂತೆ ರಾಜನು ರಾಜ್ಯದಲ್ಲಿ ಆಗುವ ಪಾಪ ಕಾರ್ಯಗಳಿಗೆ ಹೊಣೆಯಾಗಿದ್ದಾನೆ. ಆದ್ದರಿಂದ ಅವನು ಪುಣ್ಯಾತ್ಮನಲ್ಲ ಎಂಬುದಾಗಿ ಯಾಮುನರು ವಿವರಣೆ ಕೊಟ್ಟರು. ಮೂರನೆಯ ವಾಕ್ಯ "ರಾಜಪತ್ನೀ ಪತಿವ್ರತಾ" ಈ ಮಾತನ್ನು ಹೇಗೆ ಪೂರೈಸುವರೆಂದು ರಾಣಿವಾಸದವರು ಎಲ್ಲರೂ ತವಕದಿಂದಿರುವಾಗ, "ಹೇ ರಾಜ ಪ್ರತಿಯೊಬ್ಬ ಹೆಂಗಸೂ ಮದುವೆಯಲ್ಲಿ ಮುಂಚೆ ಅಗ್ನಿಗೂ ವರುಣನಿಗೂ ತರುವಾಯ ಇಂದ್ರನಿಗೂ ಧಾರೆ ಎರೆಯಲ್ಪಟ್ಟ ವೇಳೆ ಗಂಡನಿಗೆ ಪತ್ನಿಯಾಗಿ ಬರುವ ಸಂಪ್ರದಾಯ ಇರುವಾಗ ಯಾವ ಹೆಂಗಸು ಪತಿವ್ರತೆಯೆಂದು ಹೇಳಲು ಸಾಧ್ಯ" ಎಂಬುದಾಗಿ ಉತ್ತರ ಕೊಡಲು ಮಹಾ ರಾಣಿಯೂ ಯಾಮುನರ ಅದ್ಭುತ ಪಾಂಡಿತ್ಯ ವೈಖರಿಯನ್ನು ಕಂಡು ಸಭೆಗೆ ಬಂದು ಯಾಮುನರನ್ನು ತಬ್ಬಿಕೊಂಡು "ಎನ್ನೈ ಆಳ ವಂದೀರೋ"– ನಮ್ಮನ್ನು ಕಾಪಾಡಲು ಬಂದ ಗುರುಗಳೇ ಎಂಬುದಾಗಿ ಸಂಬೋಧಿಸಲು ಯಾಮುನರಿಗೆ ಅಂದಿನಿಂದ ಆಳವಂದಾರ್ ಎಂಬುವ ಅಂಕಿತ ನಾಮವು ಬಂತು.

ಮಾತಿನಂತೆ ರಾಣಿಯು ಯಾಮುನರನ್ನು ಮಧುರೆಯ ಜಿಲ್ಲೆಯ ಒಂದು ಪ್ರಾಂತಕ್ಕೆ ಸಾಮಂತ ರಾಜರನ್ನಾಗಿ ನೇಮಿಸಿದಳು. ಇದು ಇವರ ಬಾಲ್ಯದಲ್ಲಿ ತೋರಿದ ಪ್ರತಿಭೆಗೆ ತಕ್ಕಂತಹ ಪದವಿ. ಕೆಲವು ಕಾಲ ಗೃಹಸ್ಥರಾಗಿ ಮಹದೈಶ್ವರ್ಯದಲ್ಲಿ ಮಿಂದು ಭೋಗಿಗಳಾಗಿ ಮೆರೆಯುತ್ತಿದ್ದರು.

ರಾಜ್ಯಾದಿಧನಕನಕ ಸಂಪತ್ತುಗಳಿದ್ದರೂ ಯಾಮುನಾಚಾರ್ಯರಲ್ಲಿ ಏನೋ ಕೊರತೆ ಕಾಣಬರುತ್ತಿತ್ತು. ಅವರ ಹೃದಯದಲ್ಲಿ ಯಾವುದೋ ಅಸ್ಪಷ್ಟ ಕೊರತೆ ಎದ್ದು ಕಾಣುತ್ತಿತ್ತು. ಮನಕ್ಕೆ ಗೋಚರವಲ್ಲದ ಯಾವುದೋ ಸಂದೇಹ, ಒಮ್ಮೊಮ್ಮೆ ಸಂಶಯ ನಿವೃತ್ತಿಗಾಗಿ ಸೆಣಸಾಟ ನಡೆಯುತ್ತಲೇ ಇದ್ದವು. ಇವರಿಗೆ ದೇವರ ಅನುಗ್ರಹವೂ ಒದಗಿ ಬರುವ ಕಾಲವು ಸನ್ನಿಹಿತವಾಯಿತು. ಇವರ ಪಿತಾಮಹರಾದ ನಾಥಮುನಿಗಳ ಶಿಷ್ಯರಾದ ಮನಕ್ಕಾಲ್ ನಂಬಿ (ರಾಮಮಿಶ್ರರು) ಯಾಮುನಾಚಾರ್ಯರ ದರ್ಶನವನ್ನು ಹೊಂದಲು ಪ್ರಯತ್ನಿಸಿ ವಿಫಲರಾದರು. ಪ್ರತಿದಿನ ರಾಜನ ಅಡಿಗೆಗೆ ವಿಷ್ಣು ಕಾಂತಿಯನ್ನು ಒದಗಿಸಲು ಉಪಕ್ರಮಿಸಿದರು. ಒಂದು ದಿನ ರಾಮಮಿಶ್ರರು ವಿಷ್ಣು ಕಾಂತಿಯನ್ನು ಅಡಿಗೆಗೆ ಒದಗಿಸಲು ತಪ್ಪಿದರು. ಆದಿನ ಏಕೆ ವಿಷ್ಣು ಕಾಂತಿಯನ್ನು ಉಪಯೋಗಿಸಲಿಲ್ಲವೆಂದು ಯಾಮುನರು ಕೇಳಿ

ಶ್ರೀ ಕಂದಾಡೈ ಕೇಶವನ್

ದರು. ಅಡಿಗೆ ಭಟ್ಟರು ಪ್ರತಿದಿನವೂ ಫಲಾಪೇಕ್ಷೆಯಿಲ್ಲದೆ ವಿಷ್ಣುಕಾಂತಿಯನ್ನು ತರುತ್ತಿದ್ದ ವ್ಯಕ್ತಿ ಅಂದು ತರಲಿಲ್ಲವೆಂದು ನಿವೇದಿಸಿದರು. ಯಾಮುನರಿಗೆ ಆ ವ್ಯಕ್ತಿ ಯಾರೆಂದು ಸಂಶಯ ಮೂಡಿತು. ಮಾರನೆಯದಿನ ಯಾಮುನರ ಆದೇಶದಂತೆ ರಾಮ ಮಿಶ್ರರನ್ನು ಅರಮನೆಗೆ ಕರೆತಂದರು. ರಾಮಮಿಶ್ರರು ತಾವು ಇಷ್ಟು ದಿನ ಕಾದಿದ್ದು ಯಾಮುನರ ಪಿತಾಮಹರಾದ ನಾಥಮುನಿಗಳು ಬಿಟ್ಟು ಹೋದ ಕುಲಧನವನ್ನು ಒಪ್ಪಿಸಲು ಎಂಬುವುದಾಗಿ ಉತ್ತರ ಕೊಟ್ಟರು. ಕ್ರಮವಾಗಿ ಕೆಲವು ದಿನಗಳು ಯಾಮುನರಿಗೆ ತತ್ತ್ವೋಪದೇಶಗಳನ್ನಿತ್ತು ಅವರ ಕುಲಧನವನ್ನು ತೋರುವೆನೆಂದು ಹೇಳಿ ಅವರನ್ನು ಶ್ರೀರಂಗಕ್ಕೆ ಕರೆತಂದು "ಶ್ರೀರಂಗನಾಥ ದೇವರನ್ನು" ತೋರಿಸಿ, ಇದೇ ನಿಮ್ಮ ತಾತಂದಿರು ಬಿಟ್ಟು ಹೋದ ಕುಲಧನವೆಂದು ಹೇಳಲು ನಿರ್ಹೇತುಕ ಪ್ರೇಮವು ಅವರನ್ನು ಆವರಿಸಿತು. ರಂಗನಾಥನ ದಿವ್ಯ ಮಂಗಲ ವಿಗ್ರಹವನ್ನು ನೋಡುತ್ತಾ ಆತ್ಮ ಪರಿವರ್ತನೆ ಗೊಂಡಿತು. ಈಶನಲ್ಲಿ ಅನುರಾಗ ಉದಯಿಸಿತು. ಭಕ್ತಿಯಿಂದ ರೋಮಾಂಚನಗೊಂಡು ಗದ್ಗದ ಸ್ವರದಿಂದ ಆನಂದಭಾಷ್ಪವನ್ನು ಸುರಿಸುತ್ತಾ ಶ್ರೀರಂಗದಲ್ಲಿ ತಮ್ಮ ತಮ್ಮ ಮಿಕ್ಕ ಜೀವನವನ್ನು ಕಳೆಯಲು ನಿರ್ಧರಿಸಿದರು. ಅವರಿಂದ ರಚಿತವಾದ ಸೋತ್ರ ರತ್ನವೆಂಬ ಕಾವ್ಯವು ಭಕ್ತಿ ಭಂಡಾರಕ್ಕೆ ಅಪೂರ್ವ ಕಾಣಿಕೆ. ಶ್ರೀರಾಮಾನುಜರು ಇವರ ಈ ಗ್ರಂಥದಿಂದ ಬಹಳ ಉಪಕೃತರಾಗಿದ್ದಾರೆ. ವಿಶಿಷ್ಟಾದ್ವೈತವನ್ನು ಪ್ರಚಾರ ಮಾಡಿದ ರಾಮಾನುಜರು ಯಾಮುನಾಚಾರ್ಯರ ಅಂತಿಮ ಆಸೆಯಾದ ಬಾದರಾಯಣರ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದಿದ್ದೂ, ಪರಾಶರರ ಮಹಿಮೆಯನ್ನು ಪ್ರಚಾರ ಮಾಡಿದ್ದೂ, ಶ್ರೀಗೀತಾಭಾಷ್ಯವನ್ನು ಬರೆದಿದ್ದೂ ಚರಿತ್ರೆಯ ಅಂಶವಾಗಿವೆ. ಇವರ ಸ್ತೋತ್ರರತ್ನವು ವಿಶಿಷ್ಟಾದ್ವೈತ ಮತದವರನ್ನಲ್ಲದೆ ಎಲ್ಲಾಪಂಗಡಗಳ ಪಂಡಿತರನ್ನು ಸಂತೋಷಗೊಳಿಸಿದೆ. ಈ ಕಾವ್ಯಕ್ಕೆ ಅನೇಕರು ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಇವರ ಶಬ್ದ ಮಾಧುರ್ಯಕ್ಕೆ ಅಲಂಕಾರಗಳ ಚಮತ್ಕಾರಕ್ಕೆ ಮನಸೋತ ಅಪ್ಪಯ್ಯ ದೀಕ್ಷಿತರು ತಮ್ಮ "ಕುವಲಯಾನಂದ" ವೆಂಬ ಅಲಂಕಾರ ಶಾಸ್ತ್ರಗ್ರಂಥದಲ್ಲಿ ಯಾಮುನರ ಕೆಲವು ಶ್ಲೋಕಗಳನ್ನು ಉದಾಹರಿಸಿದ್ದಾರೆ. ಪಂಡಿತರತ್ನ ಜಗನ್ನಾಥ ಕವಿಯೂ ಕೂಡ ಸ್ತೋತ್ರ ರತ್ನದ ಕೆಲವು ಶ್ಲೋಕಗಳನ್ನೂ ತಮ್ಮ "ರಸ ಗಂಗಾಧರ"ದಲ್ಲಿ ಉದಾಹರಿಸಿದ್ದಾರೆ. ಹೃಷೀಕೇಶದ ಶಿವಾನಂದಸ್ವಾಮಿಗಳು "ಆಳವಂದಾರ್' ಎಂಬ ಯಾಮುನರ ಜೀವಿತವನ್ನು ಕುರಿತು ಆಂಗ್ಲದಲ್ಲಿ ನಾಟಕವನ್ನು ಬರೆದಿದ್ದಾರೆ. ರಾಮಕೃಷ್ಣ ಪರಮಹಂಸರ ಶಿಷ್ಯರಾದ ಶಿವ ಕೃಷ್ಣಾನಂದರು ಯಾಮುನರ ಸ್ತೋತ್ರ ರತ್ನಕ್ಕೆ ಬಂಗಾಳಿಭಾಷೆಯಲ್ಲಿ ಭಾವಾನುವಾದ ಮಾಡಿದ್ದಾರೆ. ತಮಿಳಿನಲ್ಲಿ ಪೂರ್ವಾಚಾರ್ಯರಾದ ಪೆರಿಯ ಆಚ್ಚಾನ್ ಪಿಳ್ಳೈಯವರು ಈ ಸ್ತೋತ್ರ ರತ್ನಕ್ಕೆ ಸೊಗಸಾದ ಭಾಷ್ಯವನ್ನು ಬರೆದಿದ್ದಾರೆ. ವಿಶಿಷ್ಟಾದ್ವೈತಮತ ಪ್ರಸಾರಕರಲ್ಲಿ ಒಬ್ಬರಾದ ವೇದಾಂತ ದೇಶಿಕರವರು ಸಂಸ್ಕೃತ ಭಾಷೆಯಲ್ಲಿ ಎಲ್ಲರನ್ನೂ ತಲೆದೂಗಿಸುವಂತಹ ವ್ಯಾಖ್ಯಾನ ಬರೆದಿದ್ದಾರೆ. ಅಂದಿನಿಂದ ಭಾರತೀಯ ಎಲ್ಲಾ ಭಾಷೆಗಳಲ್ಲಿ ಭಾವಾನುವಾದವು ನಡೆದಿವೆ.

ಈ ಸ್ತೋತ್ರರತ್ನವು ಅರವತ್ತೈದು ಸುಂದರ ಶ್ಲೋಕಗಳ ಸಂಕಲನ.

ಮೊದಲನೆಯ ಶ್ಲೋಕದಲ್ಲಿ ತಮ್ಮ ತಾತಂದಿರಾದ ನಾಥಮುನಿಗಳನ್ನು ಸ್ಮರಿಸುತ್ತಾ ಸ್ತೋತ್ರ ರತ್ನವನ್ನು ಪ್ರಾರಂಭಮಾಡುತ್ತಾರೆ.

ನಮೋಽಚಿಂತ್ಯಾದ್ಭುತಾ ಕ್ಲಿಷ್ಟ
ಜ್ಞಾನ ವೈರಾಗ್ಯರಾಶಯೇ ।
ನಾಥಾಯ ಮುನಯೇಽಗಾಧ
ಭಗವದ್ಭಕ್ತಿ ಸಿಂಧವೇ ॥

(ಜ್ಞಾನ ವೈರಾಗ್ಯ ಭಕ್ತಿಗಳು ಅಗಾಧವಾದ ಸಮುದ್ರದಂತೆ ಶ್ರೀನಾಥಮುನಿಗಳಲ್ಲಿ ಚಿಂತಿಸಲು ಅಸಾಧ್ಯವಾಗಿ ನೆಲೆಸಿರಲು ಅಂತಹ ಮಹಾಮಹಿಮೆಯುಳ್ಳ ನಾಥಮುನಿಗಳನ್ನು ವಂದಿಸುತ್ತೇನೆ) ಮುಂದೆ ನಾಲ್ಕು ಶ್ಲೋಕಗಳಲ್ಲಿ ಕ್ರಮವಾಗಿ ತಮ್ಮ ಪಿತಾಮಹರಾದ ನಾಥಮುನಿಗಳನ್ನೂ ವಿಷ್ಣು ಪುರಾಣವನ್ನು ರಚಿಸಿದ ಪರಾಶರರನ್ನೂ, ಶ್ರೀ ವೈಷ್ಣವ ಸಂಪ್ರದಾಯಕ್ಕೆ ಪ್ರಥಮಾಚಾರ್ಯರಾದ ಪ್ರಪನ್ನ ಜನಕೂಟಸ್ಥರಾದ ಶ್ರೀನಮ್ಮಾಳ್ವಾರ್‌ರವರನ್ನು ಸ್ತುತಿಸಿದ್ದಾರೆ.

ಏಳನೆಯ ಶ್ಲೋಕದಲ್ಲಿ ಭಗವಂತನ ಮಹಿಮೆ ಮಹಾಸಾಗರದಂತೆ ಅಪಾರವಾಗಿದೆ. ಸರ್ವಜ್ಞನೆಂದು ತಿಳಿದು ಮಂದಮತಿಯಾದ ನಾನು ಅವನ ಗುಣಗಳನ್ನು ಸ್ತೋತ್ರ ಮಾಡಲು ಉದ್ಯುಕ್ತನಾದೆ ನನಗೂ ಒಂದು ನಮಸ್ಕಾರವಿರಲಿ ಎಂಬುದಾಗಿ ಹೇಳಿ ಕೊಂಡಿದ್ದಾರೆ. ತಮ್ಮ ಈ ಪ್ರಯತ್ನವನ್ನು ಸಮರ್ಥಿಸಿಕೊಳ್ಳಲು

ಯದ್ವಾಶ್ರಮಾವಧಿ
ಯಥಾಮತಿ ವಾಪ್ಯಶಕ್ತಃ
ಸ್ತೌಮ್ಯೇವಮೇವ
ಖಲು ತೇಽಪಿ ಸದಾ ಸ್ತುವಂತಃ ।
ವೇದಾಶ್ಚತುರ್ಮುಖ
ಮುಖಾಶ್ಚ ಮಹಾರ್ಣವಾಂತಃ

ಕೋ ಮಜ್ಜತೋ ಅಣು
ಕುಲಾಚಲಯೋರ್ವಿಶೇಷಃ ॥

ಎಂಬ ಶ್ಲೋಕದಲ್ಲಿ ಅಸಾಧ್ಯವಾದ ಕಾರ್ಯವನ್ನು ನಾನು ಕೈಗೊಂಡೆ, ಭಗವಂತನ ಸ್ತೋತ್ರ ಮಾಡುವುದೇ ಉಚಿತ. ಅವರವರ ಶಕ್ತಿಗಳಿಗನುಸಾರವಾಗಿ ಸ್ತೋತ್ರ ಮಾಡುವುದರಲ್ಲಿ ತಪ್ಪೇನಿದೆ, ವೇದಗಳೂ ಕೂಡ "ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹಃ" ಎಂಬಂತೆ ಪರಮಾತ್ಮನ ಗುಣಗಳನ್ನು ಸಮಗ್ರವಾಗಿ ಸ್ತೋತ್ರ ಮಾಡಲು ಶಕ್ತಿಯಿಲ್ಲದೆ ಹೋಗಿರಲು, ಚತುರ್ಮುಖ ಬ್ರಹ್ಮ ಮುಂತಾದವರು ಕೂಡ ಬೆಟ್ಟದಷ್ಟು ಸ್ತೋತ್ರ ಮಾಡಿದ್ದರೂ ಕೂಡ, ಭಗವಂತನ ಮಹಿಮಾರ್ಣವದಲ್ಲಿ ಮುಳುಗಿ ಹೋಗಿರುವುದು ಸಹಜವಷ್ಟೆ. ಒಂದು ಸಣ್ಣ ಕಲ್ಲು ಹಾಗೂ ಒಂದು ಮೈನಾಕ ಪರ್ವತವೂ ಸಮುದ್ರದಲ್ಲಿ ಮುಳುಗಿರುವಂತೆ ಪರಮಾತ್ಮನ ಮಹಿಮೆ ಎಂಬ ಸಾಗರದಲ್ಲಿ ಜ್ಞಾನಿಗಳೂ, ನಾನು ಮುಳುಗಿ ಹೋಗಿರುವುದರಲ್ಲಿ ವ್ಯತ್ಯಾಸ ವೇನಿದೆ – ಎಂಬುದಾಗಿ ಹೇಳಿಕೊಂಡಿದ್ದಾರೆ.

ಸರ್ವದಾ ಸರ್ವಭಾವದಿಂದಲೂ ನಿಶ್ಚಿಂತನಾಗಿ ಈಶನನ್ನು ಉಪಾಸಿಸಿದರೆ ಅವನ ಕೃಪಾಕಟಾಕ್ಷವು ಭಕ್ತನ ಮೇಲೆ ಬೀಳುತ್ತದೆ ಎಂಬುವ ಸಾರ ಸ್ತೋತ್ರರತ್ನದಲ್ಲಿದೆ.

ಹತ್ತನೆಯ ಶ್ಲೋಕದಲ್ಲಿ ಜಗನ್ನಾಥನು ಆಶ್ರಿತರನ್ನು ಕಾಪಾಡುವುದು ಏನೂ ಆಶ್ಚರ್ಯವಲ್ಲ ಕಾರಣ ಅದು ಅವನ ಸಹಜಗುಣ ಎಂಬುದಾಗಿ ಹೇಳುತ್ತಾ

ಸಾಪೇಕ್ಷಸೇ ಯದಿ
ತತೋ ಭುವನಾನ್ಯಮೂನಿ
ನಾಲಂ ಪ್ರಭೋ ಭವಿತು
ಮೇವ ಕುತಃ ಪ್ರವೃತ್ತಿಃ ।
ಏವಂನಿಸರ್ಗ ಸುಹೃದಿ
ತ್ವಯಿ ಸರ್ವ ಜಂತೋಃ
ಸ್ವಾಮಿನ್ನ ಚಿತ್ರ ಮಿದ
ಮಾಶ್ರಿತ ವತ್ಸಲತ್ವಂ ॥

ಮೇಲಾಗಿ ಈ ಶ್ಲೋಕದಲ್ಲಿ "ಓಂ ಅಥಾತೋ ಬ್ರಹ್ಮ ಜಿಜ್ಞಾಸಾ" ಎಂಬ ಶ್ರೀ ಭಾಷ್ಯದ ಸೂತ್ರದ ಅರ್ಥವೂ, ತೈತ್ತರೀಯ ಶ್ರುತಿ ವಾಕ್ಯದ 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂಬುದರ ವಿಷಯ ನಿರೂಪಣೆಯೂ, ಭಗವಂತನ ಕಲ್ಯಾಣ ಗುಣಗಳಾದ ಜಗತ್ಕಾರಣತ್ವ, ಆತನ ಸಹೃತ್ವ, ಸ್ವಾಮಿತ್ವ ಹಾಗೂ ಆಶ್ರಿತ ವತ್ಸಲತ್ವ ಈ ಶ್ಲೋಕದಲ್ಲಿ ನಾವು ಕಾಣಬಹುದು. ಸರಲವಾದ ಅರ್ಥದಲ್ಲಿ 'ಎಲೈ ಜಗನ್ನಾಥನೇ ನಿನ್ನ ಕೃಪಾ ಕಟಾಕ್ಷವಿಲ್ಲದೆ ಈ ಜಗತ್ತಿನಲ್ಲಿ ಯಾವ ವಸ್ತುವಿಗೂ ಜನನವಿಲ್ಲ. ಜಗನ್ಮಿತ್ರನಾದ ನೀನು ಆಶ್ರಿತರನ್ನು ಕಾಪಾಡುವುದು ಹೆಚ್ಚೇನು' ಅದು ನಿನ್ನ ಸಹಜ ಗುಣವು' ಎಂದು ಸ್ತೋತ್ರ ಮಾಡಿದ್ದಾರೆ.

ಮುಂದಿನ ಹನ್ನೊಂದನೆಯದು ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಸಾರುವ ಶ್ಲೋಕ;

ಸ್ವಾಭಾವಿಕಾನವ
ಧಿಕಾತಿಶಯೇಶಿತೃತ್ವಂ
ನಾರಾಯಣ ತ್ವಯಿ
ನ ಮೃಷ್ಯತಿ ವೈದಿಕಃ ಕಃ ।
ಬ್ರಹ್ಮಾ ಶಿವ ಶ್ಶತಮಖಃ
ಪರಮ ಸ್ವರಾಟ್
ಇತ್ಯೇಽಪಿ ಯಸ್ಯ
ಮಹಿಮಾರ್ಣವವಿಪ್ರುಷ ಸ್ತೇ ॥

'ವೇದೇಷು ಪೌರುಷಂ ಸೂಕ್ತಂ' ಎಂಬಲ್ಲಿ ಪುರುಷ ಸೂಕ್ತದಲ್ಲಿ ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಸಾರಿರುವ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು ಯಾಮುನರು "ಎಲೈ ಶ್ರೀಮತಿಯ ಪತಿಯಾದ ನಾರಾಯಣನೇ ನಿನ್ನಲ್ಲಿ ಸ್ವಾಭಾವಿಕವಾದ ಅವಧಿಯಿಲ್ಲದ, ಮಹಿಮೆಯುಳ್ಳ ಈಶತ್ವವನ್ನು ಯಾವ ವೈದಿಕನು ತಾನೆ ಒಪ್ಪಲಾರನು ಬ್ರಹ್ಮ ಶಿವ ಮುಂತಾದ ದೇವತೆಗಳು ಸರ್ವೇಶ್ವರನಾದ ನಿನ್ನ ಅಗಾಧವಾದ ಮಹಿಮೆ ಎಂಬ ಸಾಗರದಲ್ಲಿ ಜಲಕಣಗಳು" ಎರದು ಕೊಂಡಾಡಿದ್ದಾರೆ.

ಈ ಶ್ಲೋಕದ ವಿಷಯವಾಗಿ ವಿಶೇಷವಾದ ಇತಿಹಾಸವೂ ಉಂಟು. ರಾಮಾನುಜರನ್ನು ಕಾಂಚೀಪುರದಿಂದ ಶ್ರೀರಂಗಕ್ಕೆ ಕರೆತರಲೂ ಯಾಮುನಾಚಾರ್ಯರ ಶಿಷ್ಯರಾದ ಪೆರಿಯ ನಂಬಿ ಈ ಮೇಲಿನ ಶ್ಲೋಕವನ್ನು ಪಠಣ ಮಾಡುತ್ತಾ ಬರುತ್ತಿರಲು, ಈ ಶ್ಲೋಕದ ಮಾಧುರ್ಯವನ್ನು ಸವಿದ ರಾಮಾನುಜರು ಇದನ್ನು ರಚಿಸಿದ ಮಹಾನುಭಾವರು ಯಾರು ಎಂಬುದಾಗಿ ಕೇಳಿ ತಿಳಿದು ಯಾಮುಚಾರ್ಯರ ದರ್ಶನವನ್ನು ಪಡೆಯಲು ಕಾಂಚೀಪುರದಿಂದ ಹೊರಟಿದ್ದು ಜನಜನಿತವಾಗಿದೆ.

ಮುಂದಿನ 12ನೆಯ ಶ್ಲೋಕದಲ್ಲಿ:
ಕಂಶ್ರೀಶ್ಶ್ರಿಯಃ ಪರಮ
ಸತ್ತ್ವ ಸಮಾಶ್ರಯಃ ಕಃ ।
ಕಃ ಪುಂಡರೀಕನಯನಃ
ಪುರುಷೊತ್ತಮಃ ಕಃ ॥
ಕಸ್ಯಾಯುತಾಯುತ
ಶತೈಕ ಕಲಾಂ ಶಶಾಂಕೇ ।
ವಿಶ್ವಂ ವಿಚಿತ್ರ ಚಿದ
ಚಿತ್ ಪ್ರವಿಭಾಗವೃತ್ತಂ ॥

ಲಕ್ಷ್ಮಿಗೆ ಆಶ್ರಯ ಭೂತನು, ಶ್ರೀಮನ್ನಾರಾಯಣನೇ. ಶುದ್ಧವಾದ ಸತ್ತ್ವಗುಣಕ್ಕೆ ಆಶ್ರಯದಾತನೂ ಅವನೇ. ಪುರುಷೋತ್ತಮನೂ, ಪುಂಡರಿಕಾಕ್ಷನೂ ಯಾರು? ಅವನೇ. ಏಕೆಂದರೆ ಜಗತ್ತಿನಲ್ಲಿ ಪ್ರಸಿದ್ಧಿ ಹೊಂದಿದ ಬ್ರಹ್ಮರುದ್ರ ಇಂದ್ರಾದಿಗಳು ಶ್ರೀಮನ್ನಾರಾಯಣನಿಂದಲೇ ಸೃಷ್ಟಿಸಲ್ಪಟ್ಟಿರುವವರು.

೧೩ ನೆಯ ಶ್ಲೋಕದಲ್ಲಿ ವಿಷ್ಣು ಪಾದೋದಕ ಮಹಿಮೆಯನ್ನೂ ೧೪ ನೆಯ ಶ್ಲೋಕದಲ್ಲಿ ಹರಿಯ ಸೃಷ್ಟಿ ಸ್ಥಿತಿಲಯಗಳ ಹಿರಿಮೆಯನ್ನು ಹೇಳಿದ್ದಾರೆ. ಪರಮಾತ್ಮನ ಕಲ್ಯಾಣಗುಣಗಳನ್ನು ಕುರಿತು ಹಾಡಿದ ಈ ಸ್ತೋತ್ರ ಎಷ್ಟು ಮನೋಹರವಾಗಿದೆ ಸಹೃದಯರು ನೋಡಿ ಆನಂದಿಸಿ.

ವಶೀ ವದಾನ್ಯೋ ಗುಣವಾನ್, ಋಜುಃ ಶುಚಿಃ
ಮೃದುರ್ದಯಾಳುಃ ಮಧುರ ಸ್ಥಿರ ಸ್ಸಮಃ ।
ಕೃತೀಕೃತಜ್ಞ ಸ್ತ್ವಮಸಿ ಸ್ವಭಾವತಃ
ಸಮಸ್ತ ಕಲ್ಯಾಣ ಗುಣಾಮೃತೋದಧಿಃ ॥

(ಸ್ವಾಮಿ ನೀನು ಪ್ರಭು, ಗುಣವಂತನು, ಕುಟಿಲ ಸ್ವಭಾವವಿಲ್ಲದವನು, ಶುದ್ಧನು. ಮೃದು ಸ್ವಭಾವವುಳ್ಳವನು, ದಯಾಳು, ಆನಂದರೂಪನು, ಸ್ಥಿರನು, ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವವನು, ಕೃತಜ್ಞನು. ನೀನು ಸ್ವಭಾವತಃ ಸಮಸ್ತ ಕಲ್ಯಾಣ ಗುಣಗಳ ಅಮೃತಸಾಗರ.)

ಭಕ್ತಿಯ ಭಾವುಕತೆಯಲ್ಲಿ ತನ್ಮಯವಾದ ಯಾಮುನರು ತಮ್ಮ ತೀವ್ರ ಹಂಬಲವನ್ನು ದೇವರಲ್ಲಿ ಯಾವ ಬಗೆಯಲ್ಲಿ ಹೇಳಿದರೂ ಸಾಲದು. ಇವರು ಹರಿಯಲ್ಲಿ ಪ್ರಪತ್ತಿಯನ್ನು ಮಾಡುವಾಗ "ಎಲೈ ಹರಿಯೇ ನೀನು ನನ್ನನ್ನು ತ್ಯಜಿಸಲು ದೂರ ನೂಕಿದರೂ ನಿನ್ನ ಚರಣ ಕಮಲಗಳನ್ನು ನಾ ಬಿಡಲಾರೆ. ತಾಯಿಯಾದವಳು ಮಗುವನ್ನು ಕೋಪದಿಂದ ದೂರ ತಳ್ಳಿದರೂ ಹಾಲು ಉಣ್ಣುವ ಮಗು ತಾಯಿಯ ಆಸರೆಯನ್ನು ಬಿಡಲಾರದಲ್ಲವೆ? ಎಂಬುದಾಗಿ ಯಾಮುನರು ಹರಿಯನ್ನು ಸಂಬೋಧಿಸುವಾಗ–

ನಿರಾಸ ಕಸ್ಯಾಪಿ ನ
ತಾವದುತ್ಸಹೇ, ಮಹೇಶ ಹಾತುಂ
ತವಪಾದ ಪಂಕಜಂ ।
ರುಷಾ ನಿರಸ್ತೋಽಪಿ ಶಿಶು ಸ್ತನಂಧಯೊ
ನ ಜಾತು ಮಾತುಃ ಚರಣೌ ಜಿಹಾಸತಿ ॥

ಯಾಮುನಾಚಾರ್ಯರ ಸಿದ್ಧಾಂತದ ಪ್ರಕಾರ ಮೋಕ್ಷವನ್ನು ಕೊಡುವಂತಹ ಮುಕುಂದನ ಪಾದಾರವಿಂದಗಳನ್ನು ಆಶ್ರಯಿಸಿದ ಮೇಲೆ ಮಾನವ ಮತ್ಯಾವುದರ ಮಮತೆಯನ್ನು ಮನಸ್ಸಿನಲ್ಲಿ ಮೂಡಿಸಿಕೊಳ್ಳಬಾರದು – ಕಾರಣ; ಮಕ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:-

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ರಂದವನ್ನು ಪಾನ ಮಾಡಿದ ದುಂಬಿಯು ತಾವರೆ ಹೂವನ್ನು ಬಿಟ್ಟು ಮುಳ್ಳಿನ ಹೂವನ್ನು ಕಣ್ಣೆತ್ತಿಯೂ ನೋಡುವುದಿಲ್ಲವಷ್ಟೆ? ಎಂಬುದಾಗಿ ೨೭ನೆಯ ಶ್ಲೋಕದಲ್ಲಿ ಹೇಳಿದ್ದಾರೆ, ಇಲ್ಲಿ ಹರಿಯೇ ಅನನ್ಯ ಶರಣನು, ಸಿದ್ಧೋಪಾಯನು ಎಂಬ ಭಾವ. ಇಪ್ಪತ್ತೆಂಟನೆಯ ಶ್ಲೋಕದಲ್ಲಿ ಭಕ್ತಿಪೂರ್ವಕವಾಗಿ ಒಂದುಸಲ ಅಂಜಲಿ ಮಾಡಿದರೂ ಸಕಲ ಪಾಪಗಳೂ ತೊಲಗಿ ಮಂಗಲಕರವಾದ ಮೋಕ್ಷವು ಲಭಿಸುತ್ತದೆ, ಎಂಬುವುದಾಗಿ ಸುತ್ತಿದ್ದಾರೆ. ಮುಂದೆ ಎರಡು ಶ್ಲೋಕಗಳಲ್ಲೂ ಕೂಡ ಸ್ವಾಮಿಯ ಪಾದಾರವಿಂದಗಳಲ್ಲಿ ಭಕ್ತಿಯನ್ನಿಟ್ಟರೆ ಸಾಕು ಅವರ ಕಷ್ಟಗಳೆಲ್ಲಾ ಕ್ಷಣದಲ್ಲಿ ನಾಶವಾಗುವುವು ಎಂಬುದಾಗಿ ಹೇಳುವಾಗ ತ್ರಿವಿಕ್ರಮನ ಸ್ಮರಣೆಯನ್ನು ಮಾಡುತ್ತಾ.

ಕದಾ ಪುನಶ್ಶಂಖ ರಥಾಂಗ ಕಲ್ಪಕ
ಧ್ವಜಾರವಿಂದಾಂಕುಶ ವಜ್ರಲಾಂಛನಂ
ತ್ರಿವಿಕ್ರಮ ತ್ವಚ್ಚರಣಾಂಬುಜದ್ವಯಂ
ಮದೀಯ ಮೂರ್ಧಾನಮಲಂಕರಿಷ್ಯತಿ

– ಹೀಗೆಂದು ಸ್ತುತಿಸಿದ್ದಾರೆ.

ಭಗವಂತನು ರಕ್ಷಿಸುವ ಭಾರವನ್ನು ಹೊರುವವನು ಎಂಬ ಭರವಸೆ ಬಲಿತಂತೆ ಅವನನ್ನು ನೋಡಬೇಕೆಂಬ ಉತ್ಕಟ ಮನೋಭಾವ ಮನಸ್ಸಿನಲ್ಲಿ ಮೂಡಿ, ಅವನು ಕಾಣದಿರಲು ಬಳಲಿ ಬೆಂಡಾಗಿ ಕುಪಿತನಾಗಿ ಮೊಂಡಾಟ ಮಾಡುವುದು ಅವನ ಸ್ವರೂಪವನ್ನು ದೂಡುವುದು, ಅವನು ತನ್ನನ್ನು ರಕ್ಷಿಸುವಭಾರ ಹೊರದಿದ್ದರೆ ತನ್ನಂತಹ ಸತ್ಪಾತ್ರನು ದೊರೆಯಲಾರನು ಎಂಬುದಾಗಿ ಮೊರೆ ಇಡುತ್ತಾ ಮತ್ತೆ ಸ್ವಾಮಿಯನ್ನು ಕುರಿತು,

ಅವಿಭೂತ ಪೂರ್ವಂ ಮಮಭಾವಿ ಕಿಂ ವಾ
ಸರ್ವಂ ಸಹೇ ಮೇ ಸಹಜಂ ಹಿ ದುಃಖಂ ।
ಕಿಂತು ತ್ವದಗ್ರೇ ಶರಣಾಗತಾನಾಂ
ಪರಾಭವೋ ನಾಥ ನತೇಽನು ರೂಪಃ ॥

(ಹೇ ಭಗವಾನ್ ದುಃಖವನ್ನು ಅನುಭವಿಸುವುದು ನನ್ನ ಸ್ವಭಾವ. ನನ್ನ ಭಾಗಕ್ಕೆ ಬಂದ ದುಃಖವನ್ನು ಎಷ್ಟಾದರೂ ನಾನು ಸಹಿಸಬಲ್ಲೆ. ಆದರೆ ನಿನ್ನ ಮುಂದೆಯೇ ನಿನ್ನ ಶರಣಾಗತನು ಪರಾಭವ ಹೊಂದುವುದೂ ನೀನು ಅದನ್ನು ಕುಳಿತು ನೋಡುವುದೂ ನಿನ್ನ ಸ್ವರೂಪಕ್ಕೆ ಉಚಿತವೇ? ಎಂಬುದಾಗಿ ಈಶನನ್ನೇ ಯಾಮುನರು ಪ್ರಶ್ನಿಸಿದ್ದಾರೆ. ಮುಂದೆ 48ನೇ ಶ್ಲೋಕದಲ್ಲಿ ತಮ್ಮ ಶರಣಾಗತಿಯನ್ನು ಸೂಚಿಸುತ್ತಾರೆ. ಎಲ್ಲಾ ಅಭಿಲಾಷೆಗಳನ್ನು ಸಂಪೂರ್ಣವಾಗಿ ತ್ಯಜಿಸಿ ಹರಿಯ ಸೇವೆಯೊಂದೇ ತಮ್ಮ ಪರಮ ಗುರಿ ಎಂಬುವುದಾಗಿ ನಿವೇದಿಸಿಕೊಂಡಿದ್ದಾರೆ

ಅಪರಾಧ ಸಹಸ್ರ ಭಾಜನಂ
ಪತಿತಂ ಭೀಮ ಭವಾರ್ಣವೋದರೇ ।
ಅಗತಿಂ ಶರಣಾಗತಂ ಹರೇ
ಕೃಪಯಾ ಕೇವಲ ಮಾತ್ಮಸಾತ್ಕುರು ॥

(ಹೇ ಸ್ವರ್ವಪಾಪಹರನೇ, ಸಹಸ್ರ ಅಪರಾಧಗಳನ್ನು ಮಾಡಿ ಭವಸಾಗರದಲ್ಲಿ ಬಿದ್ದು ಮುಳುಗಿ ಹೋಗುತ್ತಿರುವ ನಾನು ನಿನ್ನನ್ನೇ ಶರಣು ಹೊಂದುತ್ತೇನೆ. ನನ್ನನ್ನು ನೀನು ಹೊರತು ಮತ್ಯಾರು ಕಾಪಾಡಲಾರರು ನನ್ನನ್ನು ಕೃಪೆಯಿಂದ ನಿನ್ನವನ್ನಾಗಿ ಮಾಡಿಕೋ.)

ಮುಂದಿನ ಪದ್ಯಗಳಲ್ಲಿ 'ಸ್ವಾಮಿ ನೀನು ಕಲ್ಯಾಣ ಗುಣಗಳ ಗಣಿ. ನಾನು ಜನ್ಮ ಜನ್ಮಗಳಲ್ಲಿ ನಿನ್ನ ಪಾದಾರವಿಂದಗಳನ್ನು ಬಿಡಲಾರೆ. ಕಾರಣ ಸಕಲವೂ ನಿನಗೆ ಶೇಷಭೂತವಾಗಿವೆ. ನಾನು ನಿನಗೆ ಶೇಷಭೂತನು. ನನ್ನನ್ನು ರಕ್ಷಿಸುವ ಭಾರ ಶ್ರೀಮತಿ ಪತಿಯಾದ ನಿನಗೆ ಸೇರಿದ್ದು.' 55ನೆಯ ಶ್ಲೋಕದಲ್ಲಿ ಚೇತನನಿಗೆ ಪರಮೋಪಾಯ ಹಾಗೂ ನಿರಂತರ ಸುಖವನ್ನೀವುದು ಯಾವುದೆಂದರೆ ಭಗವಂತನಿಗೂ ಅವನ ಭಕ್ತರ ಕೈಂಕರ್ಯವನ್ನು ಮಾಡುವುದರ ಆನಂದಮಾರ್ಗದಿಂದ. ಅದಕ್ಕಾಗಿ ಯಾಮುನರು;

ತವ ದಾಸ್ಯ ಸುಖೈಕ ಸಂಗಿನಾಂ
ಭವನೇಷು ಅಸ್ತ್ವಪಿ ಕೀಟಜನ್ಮಮೇ ।
ಇತರಾವಸಥೇಷು ಮಾಸ್ಮಭೂ
ದಪಿ ಮೇ ಜನ್ಮ ಚತುರ್ಮುಖಾತ್ಮನಾ ॥

ನಿನ್ನಲ್ಲಿ ಏಕಾಂತ ಭಕ್ತಿಯುಳ್ಳ ಭಕ್ತರ ಮನೆಯಲ್ಲಿ ಒಂದು ಹುಳುವಾಗಿ ಜನ್ಮವಾದರೂ ನನಗೆಲಭಿಸಲಿ, ಆದರೆ ನಿನ್ನಲ್ಲಿ ಭಕ್ತಿ ಇಲ್ಲದವರ ಮನೆಯಲ್ಲಿ ಚತುರ್ಮುಖ ಬ್ರಹ್ಮನಾಗಿ ಹುಟ್ಟುವ ಗೋಜೂ ನನಗೆ ಬೇಡ ಎಂಬುದಾಗಿ ಪ್ರಾರ್ಥಿಸಿಕೊಂಡಿದ್ದಾರೆ.

ಮುಂದೆ 63, ಹಾಗೂ 64 ನೆಯ ಶ್ಲೋಕದಲ್ಲಿ ಸ್ವಾಮಿಯ ಪರಮಕೃಪಾಲು, ಆಶ್ರಿತರು ಎಷ್ಟೇ ಅಪರಾಧಗಳನ್ನು ಮಾಡಿದ್ದರೂ ಕ್ಷಮಿಸುವ ಗುಣ ಆ ಸ್ವಾಮಿಯ ಹಿರಿಯಗುಣ ಪತ್ನೀ ವಿಚಾರದಲ್ಲಿ ಅಪರಾಧ ಮಾಡಿದ ಕಾಕಾಸುರನನ್ನು ರಾಮನು ಕ್ಷಮಿಸುವ ದೃಷ್ಟಾಂತ, ನೂರು ಅಪರಾಧಗಳನ್ನು ಮಾಡಿದ ಶಿಶುಪಾಲನಿಗೆ ಮೋಕ್ಷ ಸಾಮ್ರಾಜ್ಯ ಕೊಟ್ಟ ಕೃಷ್ಣನ ಕೃಪಾಕಟಾಕ್ಷದ ಕಥೆ, ಮಿತ್ರಭಾವದಿಂದ ಬಂದ ವಿಭೀಷಣ ಶರಣಾಗತಿಯ ದಿವ್ಯ ಸಂದೇಶಗಳನ್ನು ಸಾರುವ ರಹಸ್ಯಾರ್ಥಗಳ

(36ನೇ ಪುಟ ನೋಡಿ)

# ಶ್ರೀ ಪಾದರಾಜರು ಚಿತ್ರಿಸಿದ ಬಾಲಕೃಷ್ಣ

ಕರ್ನಾಟಕದ ಹರಿದಾಸ ಸಾಹಿತ್ಯದ ಶ್ರೀಕಾರ ಪುರುಷರಾದ ಶ್ರೀಪಾದರಾಜರ ಅಂಕಿತ ರಂಗ ವಿಠಲ. ಅವರ ಅಂಕಿತದಲ್ಲಿಯ ರಂಗ ಎಂಬ ಶಬ್ದ ಬಾಲಕೃಷ್ಣನಿಗೆ ಮೀಸಲಿದ್ದಂತೆ. ಈಗಿನ ಕಾಲದ ಪ್ರೀತಿಯ ಹೆಸರುಗಳಾದ ರಾಜು, ಪುಟ್ಟು, ಬಾಬು ಮೊದಲಾದವುಗಳಂತೆ ಶ್ರೀಪಾದರಾಜರು ಬಾಲ ಕೃಷ್ಣನಿಗೆ ಇಟ್ಟ ಹೆಸರು ರಂಗ, ರಂಗಯ್ಯಾ. ಶ್ರೀಪಾದರಾಜರ ದೊರೆತ, ಪ್ರಕಟಗೊಂಡ ಕೃತಿಗಳಲ್ಲಿ ಸುಮಾರು ಹತ್ತು ಕೃತಿಗಳು ಕೃಷ್ಣನ ಬಾಲ ಲೀಲೆಗೆ ಮೀಸಲಾಗಿವೆ.

ಶಾಸ್ತ್ರಗ್ರಂಥಗಳ ವ್ಯಾಸಂಗ ಸಿದ್ಧಾಂತ ಪ್ರಚಾರ-ಇವೇ ಮೊದಲಾದ ಮಠಾಧಿಪತಿಗಳ ಮಾಡಬೇಕಾದ ಕಾರ್ಯ ಸಂಪ್ರದಾಯಕವಾಗಿ ಸಂಸ್ಕೃತದಲ್ಲಿ ಮಾಡಿದಂತೆಯೇ ಕನ್ನಡ ಹರಿದಾಸ ಸಾಹಿತ್ಯದಲ್ಲಿ ವಾತ್ಸಲ್ಯ ಭಾವದಲ್ಲಿ ಮೂಲಪಾಗೂ ಮಾದರಿಪ್ರಾಯವಾದ ಕೃತಿಗಳನ್ನು ಅವರು ರಚಿಸಿದರು. ಶ್ರೀಪಾದರಾಜರ ಈ ವಿಭಾಗದ ಕೃತಿಗಳು ಸಾಮಾನ್ಯವಾಗಿ ಕೃಷ್ಣನ ಜಾರತ್ವ ಹಾಗೂ ಚೋರತ್ವ ಕುರಿತವುಗಳಾಗಿವೆ. ಗೋಪಿಯರ ದೂರು ಅಥವಾ ತಾಯಿಯ ಆಕ್ಷೇಪಣೆಯನ್ನು ಆ ಕೃತಿಗಳಲ್ಲಿ ನಾವು ಮೇಲಿಂದ ಮೇಲೆ ಕಾಣಬಹುದು.

ಹೊರಗೆ ಹೋಗಿ ಆಟವಾಡಿ ಬಳಲಿಬಂದ ಕೃಷ್ಣನನ್ನು ಕುರಿತು,

ಎಲ್ಲಾಡಿ ಬಂದ್ಯೋ ಎನ್ನ ರಂಗಯ್ಯಾ ನೀ
ನೆಲ್ಲಾಡಿ ಬಂದ್ಯೋ ಎನ್ನ ಕಣ್ಣ ಮುಂದಾಡದೆ

ಈ ಕೀರ್ತನೆಯಲ್ಲಿ ಕೃಷ್ಣನಲ್ಲಿರುವ ಭಕ್ತಿಯಿಂದ ತಾಯಿ ಗೋಪಿಯ ಮೂಲಕ ಮಗುವಿಗೆ ಕೌತುಕದಿಂದ ಕೇಳುತ್ತಿರುವಂತೆ ಚಿತ್ರಿಸಿದ್ದಾರೆ. ತಾಯಿಯಾದರೂ ಕೂಡಾ ಯಶೋದೆಗೆ ಆಗಾಗ ಆ ಮಹಿಮನ ಸರ್ವೋತ್ತಮತ್ವದ ಜ್ಞಾನ ಬರುತ್ತಿರುತ್ತದೆ.

ಯಶೋದೆಯೂ ಕೃಷ್ಣನ ಆಟಪಾಟಗಳನ್ನು ನೋಡಲು ಬಹಳ ಉತ್ಸುಕಳಾಗಿದ್ದಳು. ಮನೆಯಲ್ಲಿ ಅವನಿಗೆ ವಿವಿಧ ರೀತಿಯ ಭಕ್ಷ್ಯ, ಭೋಜ್ಯಗಳನ್ನು ಉಡಿಗೆ ತೊಡಿಗೆಗಳನ್ನು ಅಣಿ ಮಾಡಿದ್ದಳು. ಕೃಷ್ಣನು ಮನೆ ಬಿಟ್ಟು ಹೊರಗೆ ಆಡಿ ಬರುವುದನ್ನು ಮಾತೃ ಹೃದಯ ಸಹಿಸದಾಗಿದೆ. ಮನೆಯಲ್ಲಿ ನೀಡಿದ ಚಿನಿಪಾಲು ಕುಡಿದು ಓರಗೆಯ ಮಕ್ಕಳೊಡನೆ ಮುದ್ದಾಗಿ ಮನೆಯಲ್ಲಾಡದೆ ಎಲ್ಲಾಡಿ ಬಂದೆ? ಎಂದು ಪ್ರಶ್ನಿಸುವಳು, ಏಕೆಂದರೆ ತಾಯಿಯು ಮಗುವಿನ ಆಟಪಾಟಗಳನ್ನು ನೋಡಿ ಕೃತಾರ್ಥಳು ಸಂತುಷ್ಟಳೂ ಆಗಲಪೇಕ್ಷಿಸಿದ್ದಾಳೆ. ನಂತರ ಮಗು ಆಡಲು ಹೋದರೆ ಹೋಗಲಿ ಕನಿಷ್ಠಪಕ್ಷ ಹೇಳಿಯಾದರು ಹೋಗಬಾರದೆ, ಹಾಗೆ ಹೇಳದುದರಿಂದಾಗಿ ತಾಯಿಯು ನೆರಮನೆ, ಗುಡಿಗುಂಡಾರಗಳನ್ನು ಹುಡುಕುವಳು. ಸಹಜ ಪ್ರಪಂಚದಲ್ಲಿ ತಾಯಿಯು ತನ್ನ ಮಗು ಒಂದು ಕ್ಷಣ ಕಾಣದಿದ್ದರೆ ಎಷ್ಟು ಕಾತರದಿಂದ ಅಲ್ಲಿ ಇಲ್ಲಿ ಹುಡುಕುವಳೊ ಹಾಗೆ ಯಶೋದೆಯೂ ಬಾಲಕೃಷ್ಣನಿಗಾಗಿ ಅಷ್ಟ ದಿಕ್ಕುಗಳಲ್ಲಿ ಅರಸಿದಳು, ಅಲ್ಲೆಲ್ಲಿಯು ಕಾಣದಾದಾಗ ಅವಳ ದೃಷ್ಟಿಯೇ ಕೆಟ್ಟು ಹೋಯಿತು. ಇನ್ನೆಷ್ಟು ಹೇಳಲಿ ನನ್ನ ಕಣ್ಣ ಮುಂದಾಡಬಾರದೆ?, ಎಂದು ತಾಯಿಯು ತನ್ನ ಮಗನಿಗೆ ಪ್ರಶ್ನಿಸುವ ರೀತಿಯಲ್ಲಿ ಶ್ರೀಪಾದರಾಜರ ಕೀರ್ತನೆ ಮುಕ್ತಾಯವಾಗುತ್ತದೆ. ಅವರ ಇನ್ನೊಂದು ಕೃತಿ ಬಹಳ ಸುಂದರವಾಗಿದೆ. ಅದನ್ನು ಅವರ ಶಬ್ದಗಳಲ್ಲಿಯೇ ಕೇಳುವಾ,

ಎಲ್ಲಾಡಿ ಬಂದ್ಯೋ ನೀ ಹೇಳಯ್ಯಾ
ನಿಲ್ಲು ನಿಲ್ಲು ಗೋಪಾಲ ಕೃಷ್ಣಯ್ಯ

ನೊಸಲಲಿ ಕಿರು ಬೆವರಿಟ್ಟಿದೆ ಅಲ್ಲಿ
ಹೊಸಪರಿ ಸುದ್ದಿಯು ಹುಟ್ಟಿದೆ
ಪುಸಿಯಲ್ಲ ಈ ಮಾತು ಮುಟ್ಟಿದೆ ನಿನ್ನ
ನಸುನಗೆ ಕೀರ್ತಿ ಹೆಚ್ಚಿದೆ

ಬೆರಳ ಉಂಗುರವೆಲ್ಲಿ ಹೋಗಿದೆ ನಿನ್ನ
ಕೊರಳ ಪದಕವೆಲ್ಲಿ ನೀಗಿದೆ
ಸರತೆಲ್ಲ ಅವಳಲ್ಲಿ ಸಾಗಿದೆ ಆ
ತರುಣಿ ಮಹಿಮೆ ಹೀಗಾಗಿದೆ

ಕಳ್ಳತನವ ಹೀಗೆ ಮಾಡಿದೆ ನಿನ್ನ
ಸುಳ್ಳು ಕಡೆಗೆ ನಾ ನೋಡಿದೆ
ಎಲ್ಲರಿಗೂ ಠಕ್ಕುಮಾಡಿದೆ
ಚೆಲುವ ರಂಗ ವಿಠಲ ನಗೆಗೀಡಾದೆ

ಈ ಕೀರ್ತನೆಯಲ್ಲಿ ಸಕಲ ಗೋಪೀಜಾರ ಎಂದು ದೂರುವ ಕೃಷ್ಣನ ಬಗ್ಗೆ ಕಳ್ಳವಾರ್ತೆ ಗೋಕುಲವೆಲ್ಲಾ ಹರಡಿದ್ದು. ಆದರಿಂದ ಅವನ ತಾಯಿ ನೊಂದದ್ದು ಬಹುರಮ್ಯವಾಗಿ ಚಿತ್ರಿಸಿದ್ದಾರೆ, ಈ ಕೀರ್ತನೆಯ ಭಾಷೆ ಎಷ್ಟು ಮೃದುವಾಗಿದೆಯೊ ಭಾವವೂ ಅಷ್ಟೇ ಸರಳವಾಗಿದೆ. ಇಂತಹ ಕೀರ್ತನೆಗಳು ದಾಸ ಸಾಹಿತ್ಯದಲ್ಲಿ ಕಳಶಪ್ರಾಯವಾಗಿವೆ.

ಗೋಕುಲದಲ್ಲಿ ಇಷ್ಟೆಲ್ಲ ವಾರ್ತೆ ಹುಟ್ಟಿರುವುದರಿಂದ ಚೆಲುವ ರಂಗ ವಿಠಲ ನಗೆಗೀಡಾದೆ ಎಂದು ಕೊನೆಗೆ ತಾಯಿಯು ಮಗನಿಗೆ ಇನ್ನು ಮುಂದಾದರೂ ಪಾತಕಲಿಯಲಿ ಎಂಬ ಬುದ್ಧಿವಾದದ ಹೇಳಿಕೆಯನ್ನು ಇಲ್ಲಿ ಊಹಿಸಬಹುದಾಗಿದೆ.

ಇನ್ನೊಂದು ಕೃತಿ,

ಕೇಳಿದ್ಯಾ ಕೌತುಕ ವನ್ನು ಕೇಳಿದ್ಯಾ
ಕೇಳಿದ್ಯಾ ಕೌತುಕವನ್ನು ನಾ
ಕೇಳಿದೆ ನಿನಗಿಂತ ಮುನ್ನ 'ಅಹಾ'
ಚಾಳಿಕಾರ ಕೃಷ್ಣ ಪೇಳದೆ ಮಧುರೆಗೆ
ಕೋಳಿ ಕೂಗದ ಮುನ್ನ ನಾಳೆ ಪಯಣವಂತೆ

ಈ ಕೃತಿಯಲ್ಲಿ ಅಕ್ರೂರನು ಕೃಷ್ಣನನ್ನ ಕರೆಯಲು ಬಂದದ್ದು ; ಕೃಷ್ಣನು ಹೋಗಲು ಸಿದ್ಧನಾಗಿರುವುದನ್ನು ಚಿತ್ರಿಸಲಾಗಿದೆ. ಈ ಕೀರ್ತನೆಯ ಪ್ರಾರಂಭವೇ ಬಹುಸ್ವಾರಸ್ಯವಾಗಿದೆ. ನಾಟಕೀಯ ಶೈಲಿಯಲ್ಲಿ ಪ್ರಾರಂಭವಾಗಿ, ಅಸಹಾಯಕ ಭಾವದಲ್ಲಿ ಮುಕ್ತಾಯವಾಗುತ್ತದೆ. ಕೃಷ್ಣನು ಮಥುರೆಗೆ ಹೋಗಿರುವ ಸುದ್ದಿ ಗೋಪಿಯರೆಲ್ಲರಿಗೆ ಕೌತುಕವಾಗಿದೆ. ಅವರು ಪರಸ್ಪರ ಹೇಳಿಕೊಳ್ಳುತ್ತಿರುವಾಗ ಅವರಲ್ಲೊಬ್ಬಳು ನಾನು ನಿನಗಿಂತ ಮುಂಚೆ ಕೇಳಿದ್ದೇನೆ ಎಂದು ತನ್ನ ಹೆಗ್ಗಳಿಕೆಯನ್ನು ಸ್ಥಾಪಿಸುವುದನ್ನು ನಾವು ಕಾಣಬಹುದು. ಕೃಷ್ಣನು ಮಧುರೆಗೆ 'ಪೇಳದೆ' ಹೋಗುತ್ತಿರುವುದರಿಂದ ಅವನಿಗೆ ಚಾಳಿಗಾರ ಎಂದು ಸಂಬೋಧಿಸಿರುವುದು ಔಚಿತ್ಯಪೂರ್ಣವಾಗಿದೆ.

ಮುಂದಿನ ನುಡಿಗಳಲ್ಲಿ ಕರೆಯಲು ಬಂದವನು ಯಾರು, ಕೃಷ್ಣನು ಮಾವನ ಮನೆಗೆ ಹೋಗುತ್ತಿರುವುದು ಏಕೆ, ಅಲ್ಲಿಯ ಸ್ವಾಗತದ ವೈಭವಗಳನ್ನು ವರ್ಣಿಸಲಾಗಿದೆ. ಕೊನೆಯಲ್ಲಿ ಗೋಪಿಯೊಬ್ಬಳು ಕೃಷ್ಣನು ಮಾವನ ಮನೆಗೆ ಹೋಗುವುದು ತಮಗೆ ತಮಗೆ ಆಗದ ಸುದ್ದಿ, ಅದನ್ನು ಎಷ್ಟೆಂದು ಹೇಳಲಿ ಎಂದು ಹತಾಶಳಾಗುವಳು.

ಗೋಕುಲದಲ್ಲಿ ಕೃಷ್ಣನು ನಡೆಸಿದ ಹಾವಳಿ ಅಷ್ಟಿಷ್ಟಲ್ಲ. ಹಾಲು ಮೊಸರು ಬೆಣ್ಣೆಗಳನ್ನು ಸೂರೆ ಮಾಡಿದ್ದು, ಗೋಪಿಯರು ಎಷ್ಟು ಸಿಟ್ಟುಮಾಡಿದರೂ ಲೆಕ್ಕಿಸದೆ ಅವರಿಗೆ ಕಿರುಕುಳ ಕೊಟ್ಟದ್ದೆ

ಶ್ರೀ ವಾಸುದೇವ ಅಗ್ನಿಹೋತ್ರಿ

ಕೊಟ್ಟಿದ್ದು. ಅವನ ಕೀಟಲೆಗಳನ್ನು ಸಹಿಸದೆ ಗೋಪಿಯರು ಗುಂಪು ಗುಂಪಾಗಿ ಬಂದು ಯಶೋದೆಯಲ್ಲಿ ತಮ್ಮ ತಮ್ಮ ದೂರುಗಳನ್ನು ಹೇಳಿಕೊಳ್ಳುವರು, ಈ ಚಿತ್ರವನ್ನು ಶ್ರೀಪಾದರಾಜರು ಬಹುಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಗೋಪಿಯರು ಯಶೋದೆಯ ಇದಿರಿನಲ್ಲಿಯೇ ದೂರುವುದು ಒಂದು ಪರಿಯಾದರೆ, ಕೃಷ್ಣನು ಅದೆಲ್ಲವು ಸುಳ್ಳು ಎಂದು ವಾದಿಸುವುದು, ಸಾಕ್ಷ್ಯಾಧಾರಗಳಿಂದ ಸಮರ್ಥಿಸುವುದು, ಇನ್ನೊಂದು ಪರಿ. ಬಾಲಗೋಪಾಲನ ಮುಗ್ಧ ಪ್ರಶ್ನೆಗಳಿಗೆ ಯಾರಿಂದಲೂ ಸರಿಯಾದ ಉತ್ತರ ಕೊಡಲಾಗದು. ಆ ಕೀರ್ತನೆಯ ಸವಿ ನೋಡುವಾ,

ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ
ಇಲ್ಲದ ಸುದ್ದಿಪುಟ್ಟಿಸಿ
ಕಳ್ಳನೆಂದು ದೂರುತ್ತಾರೆ ಗೋಪಿ ಎನ್ನು
ಕೊಲ್ಲಬೇಕೆಂದು ಬಗೆದು

ಹರವಿಯ ಹಾಲು ಕುಡಿಯಲು ಎನ್ನ ಹೊಟ್ಟೆ
ಕೆರೆಯೇನೆ ಹೇಳಮ್ಮಯ್ಯ
ಕರೆದು ಅಣ್ಣನ್ನ ಕೇಳಮ್ಮ ಉಂಟಾದರೆ
ಒರಳಿಗೆ ಕಟ್ಟಮ್ಮಯ್ಯ......... ೧

ಮೀಸಲು ಬೆಣ್ಣೆಯನು ಮೆಲುವದು ಎನಗೆ
ದೋಷವಲ್ಲವೇನಮ್ಮಯ್ಯ
ಆಸೆಮಾಡಿದರೆ ದೇವರು ಕಣ್ಣ
ಮೋಸದಿ ಕುಕ್ಕುವನಮ್ಮಯ್ಯ......... ೨

ಅಟ್ಟವನೇರಿ ಹಿಡಿವುದು ಅದು ಎನಗೆ
ಕಷ್ಟವಲ್ಲವೆ ಹೇಳಮ್ಮಯ್ಯ ನೀ
ಕೊಟ್ಟಹಾಲು ಕುಡಿಯಲಾರದೆ ನಾನು
ಬಟ್ಟಲೊಳಗಿಟ್ಟು ಪೋದೆನೆ......... ೩

ಪುಂಡತನವ ಮಾಡಲು ನಾನು ದೊಡ್ಡ
ಗಂಡಸೇನೆ ಹೇಳಮ್ಮಯ್ಯ ಎನ್ನ
ಕಂಡವರು ದೂರುತಾರೆ ಗೋಪಮ್ಮ ನಾನಿನ್ನ
ಕಂದನಲ್ಲವೆ ಅಮ್ಮಯ್ಯ........ ೪

ಉಂಗುರದ ಕರದಿಂದ ಗೋಪಮ್ಮ ತನ್ನ
ಶೃಂಗಾರದ ಮಗನೆತ್ತಿ
ರಂಗವಿಠಲನ ಪಾಡಿ ಉಡುಪಿನ ಉ
ತ್ತುಂಗ ಕೃಷ್ಣನ ತೂಗಿದಳು....... ೫

ಇಲ್ಲಿ ಗೋಪಿಯರೆಲ್ಲರು ಕೂಡಿ ಯಶೋದೆಯ ಮುಂದೆ ಕೃಷ್ಣನು, ಹರವಿಗಟ್ಟಲೆ ಹಾಲು ಕುಡಿದದ್ದು ಮೀಸಲಿಟ್ಟ ಬೆಣ್ಣೆಮೆದ್ದದ್ದು, ಅಟ್ಟವೇರಿ ಹಾಲು ಕುಡಿದದ್ದು, ಹಾಗೂ ತಮಗೆಲ್ಲ ಪುಂಡತನ ಮಾಡಿದ ದೂರುಗಳ ವರದಿ ಒಪ್ಪಿಸಿ ಹೋದಮೇಲೆ, ತಾಯಿಯು ಕೃಷ್ಣನಿಗೆ ಅವುಗಳ ನ್ಯಾಯ ವಿಚಾರಣೆ ಮಾಡುವ ವಿಷಯದ ಮೇಲೆ ಕೀರ್ತನೆ ರಚಿತವಾಗಿದೆ. ಯಶೋದೆಯು ಗೋಪಿಯರು ಒಪ್ಪಿಸಿದ ದೂರಿನ ವರದಿಯಲ್ಲಿ ಒಂದೊಂದಾಗಿ ವಿಚಾರಿಸಿದರೆ ಕೃಷ್ಣನು ಕೊಡುವ ಉತ್ತರ ಸ್ವಾರಸ್ಯವಾಗಿಯೂ ತರ್ಕಬದ್ಧವಾಗಿಯೂ ಇವೆ. ನ್ಯಾಯಾಲಯದಲ್ಲಿಯ ವಾಗ್ವಾದದಂತೆ ಈ ಕೀರ್ತನೆ ರಚಿತವಾಗಿದೆ.

ಕೃಷ್ಣನ ಮೊದಲನೆ ವಾದ-ಹರವಿಯ ಹಾಲು ಕುಡಿಯಲು ನನ್ನ ಹೊಟ್ಟೆಯೇನು ಕೆರೆಯೆ? ಬೇಕಾದರೆ ಅಣ್ಣನ ಕೇಳು. ಇಲ್ಲಿ ಅಣ್ಣನೇ ಸಾಕ್ಷಿ, ಕುಡಿದಿದ್ದು ನಿಜವಾದರೆ –ಶಿಕ್ಷೆ – ಒರಳಿಗೆ ಕಟ್ಟು ಎನ್ನುವುದು. ಎರಡನೇವಾದ – ಮೀಸಲು ಬೆಣ್ಣೆ ತಿನ್ನುವುದಕ್ಕೆ ದೇವರೇ ಸಾಕ್ಷಿ, ತಿಂದರೆ ದೇವರು ಕಣ್ಣು ಕಳೆಯಲಿ ಎನ್ನುವ ಶಿಕ್ಷೆ. ಅದಾವ ದೇವರು ಕಣ್ಣು ಕಳೆಯ ಬೇಕೋ! ಮೂರನೇ ದೂರು–ಅಟ್ಟವನ್ನೇರಿ ಹಾಲು ಕದ್ದದ್ದು, ಅದಕ್ಕೆ ತಾಯಿ ಯಶೋದೆಯೆ ಸಾಕ್ಷಿ, ಏಕೆಂದರೆ ಅಟ್ಟವೇರುವುದು ಪುಟ್ಟ ಮಗುವಾದ ಕೃಷ್ಣನಿಗೆ ಕಷ್ಟ, ಮೇಲಾಗಿ ಯಶೋದೆ ಕೊಟ್ಟ ಬಟ್ಟಲು ಹಾಲಿನಲ್ಲಿಯೇ ಕುಡಿದು ಉಳಿಸಿ ಹೋದವನಿಗೆ ನೆರಮನೆಯ ಅಟ್ಟದ ಮೇಲಿನ ಹಾಲು ಕದ್ದು ಕುಡಿಯುವ ಅವಶ್ಯಕತೆಯಾದರು ಎಲ್ಲಿದೆ. ಕೊನೆಯ ದೂರು ಎಂದರೆ, ಸಕಲಗೋಪಿ ಜಾರತ್ವ, ಅವರೆಲ್ಲರ ಮಾನಹಾನಿ ಮಾಡಿದ ಪುಂಡ ಎಂಬುದು. ಅದಕ್ಕೆ ಕೃಷ್ಣನ ಉತ್ತರ ಬಹುಸ್ವಾರಸ್ಯವಾಗಿದೆ. ನನ್ನನ್ನು ಪುಂಡನೆಂದು ದೂರಲು ನಾನೇನು ದೊಡ್ಡ ಗಂಡಸೆ? ನಿನ್ನಯ ಪುಟ್ಟ ಕಂದನಲ್ಲವೆ? ನನ್ನ ಗುಣ ನಿನಗೆ ಗೊತ್ತಿಲ್ಲವೆ? ಎಂದು ತಾಯಿಗೆ ಬಹು ದೈನ್ಯದಿಂದ ಬೇಡಿದಂತೆ ವಾದಿಸುವನು. ಗೋಪಿಯರೆಲ್ಲರು ಸೇರಿ ತನ್ನನ್ನು ಕೊಲ್ಲುವ ಉಪಾಯದಿಂದ ಬಂದು ನಿನ್ನ ಮುಂದೆ ದೂರು ಹೇಳುತ್ತಿರುವರು. ಅದೆಲ್ಲ ಸುಳ್ಳು ಎಂದು ಸಾಧಾರವಾಗಿ ಸಮರ್ಥಿಸಿ ಗೆಲ್ಲುವನು. ಮಗನ ಮಾತು ಸತ್ಯಎಂದು ತಿಳಿದ ಮೇಲೆ ಯಶೋದೆಯೂ ಅವನನ್ನು ಎತ್ತಿ ಮುದ್ದಾಡಿದಳು. ತಾಯಿಗೆ ಮಗನ ಮೇಲೆ ಮಮತೆ ಇದ್ದಾಗ್ಯೂ ಎಷ್ಟು ಶಿಕ್ಷೆಯಲ್ಲಿಟ್ಟದ್ದಳು. ಅವಳ ಸಂಯಮ ಹಾಗೂ ಆದರ್ಶ ಅನುಕರಣೀಯವಾಗಿದೆ. ಯಶೋದೆಯು ಅಷ್ಟು ಶಿಕ್ಷೆಯಲ್ಲಿಟ್ಟಿದ್ದರೂ ಅವಳ ಕಣ್ಣು ತಪ್ಪಿಸಿ ಅವನೆಷ್ಟು ಸ್ವತಂತ್ರ ತುಂಟನಿದ್ದನೆಂಬ ಹಲವಾರು ವಿಷಯಗಳು ನಮಗೆ ದಾಸರ ಕೃತಿಗಳಲ್ಲಿ ತಿಳಿದು ಬರುತ್ತದೆ. ತಾಯಿ ಮಕ್ಕಳ ವ್ಯವಹಾರದಲ್ಲಿ ಕೋಪಕ್ಕೆ ತಾವಿಲ್ಲ! ಅದು ಬಿಸಿಲಿಗೆ ಮಂಜು ಕರಗಿದಂತೆ ಗಾಢವಾದ ವಾತ್ಸಲ್ಯ ಪ್ರೇಮದಿಂದ ಕೂಡಲೆ ಕರಗಿ ನೀರಾಗಿ ಬಿಡುತ್ತದೆ.

"ದೃಷ್ಟಿ ತಾಕೀತೋ ಬೀದಿ ಮೆಟ್ಟಬ್ಯಾಡವೋ"

ಈ ಕೀರ್ತನೆಯಲ್ಲಿ ದೃಷ್ಟಿತಾಕುವುದೆಂಬ ಭಯದಿಂದ ಮಾತೃ ಹೃದಯದಲ್ಲಿ ವ್ಯಕ್ತವಾದ ಪ್ರೀತಿ ಎಳನುಡಿಗಳ ಶಬ್ದ ಮೂಡಿಬಂದಿವೆ.

"ಬಾರೋ ನಮ್ಮ ಮನೆಗೆ ಗೋಪಾಲ ಕೃಷ್ಣ

ಗೋಪಾಲನ ಹಾವಳಿ ಸಹಿಸಲಾರದೆ ದೂ ಹೇಳುವ ಗೋಪಿಯರು ಹಲವರಿದ್ದಾರೆ. ಅವ ಆಗಮಕ್ಕಾಗಿಯೇ ಸದಾ ಎದುರು ನೋಡುವವ ಹಲವರುಂಟು. ಅವರೆಲ್ಲಾ ಬಂದು 'ಬಾರೊ ನಮ್ಮ ಮನೆಗೆ' ಎಂದು ಆಹ್ವಾನ ಮಾಡು ಕೀರ್ತನೆಯು ಬಹು ಸೊಗಸಾಗಿದೆ. ಅವ ಅವನಿಗೆ 'ಮೊಸರನೆಲ್ಲ ಸವಿದ ಕೃಷ್ಣ ಅಂಗನೆಯ ವ್ರತಭಂಗ ಮಾಡಿದ ರಂಗವಿಠಲ' ಎಂದು ಸಂಬೋಧಿಸಿ ಕರೆಯುವುದರಿಂದ ಅವರು ಇಷ್ಟೆಲ್ಲಾ ಕೋಟ ಗಳನ್ನು ಸಹಿಸಿಯೂ ಅವನನ್ನು ಬಿಟ್ಟು ಒಂದ ಕ್ಷಣವೂ ಇರಲೊಲ್ಲರು, ಮನಸ್ಸೇಬಾರದೆಂದ ಬಹು ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ. ಶ್ರೀಪಾದರಾಜರಿಗೆ–ತಾವು, ಗೋಪಿಯರು, ಯಶೋದ ಮೊದಲಾದವರು ಕೃಷ್ಣನನ್ನು ಸ್ತುತಿಸುತ್ತ ಆಡಿಸಿರುವುದ ಸಾಲದೇನೋ ಎಂಬಂತೆ ಗೆಳೆಯನೊಬ್ಬನ ಪಾತ್ರ ಸೃಷ್ಟಿಸಿ ಅವನಿಂದ ಅವರಿಬ್ಬರ ಬಾಲ್ಯದ ಸವಿನೆನಪುಗಳನ್ನು ಓದುಗರ ಗಮನಕ್ಕೆ ತರುತ್ತಾರೆ.

"ಮರೆತೆಯೇನೋ ರಂಗಾ ಮಂಗಳಾಂಗ
ತುರುಕರು ಕಾಯುವಲ್ಲಿ ಕೊಂಡನಾಗಿದ್ದೆನ್ನ"

ಇಲ್ಲಿ ಒಬ್ಬ ಗೆಳೆಯನಿಂದ ಅವರಿಬ್ಬರೂ ಚಿಕ್ಕಂ ನಲ್ಲಿ ಹಸುಕಾಯುವಾಗ ಆಡಿದ ಆಟ, ಪಾ ಕಂಡುಂಡ ರಸನಿಮಿಷಗಳನ್ನು ನೆನಪಿಗೆ ತಂದ ಕೃಷ್ಣನಿಗೆ ತನ್ನ ಪರಿಚಯ ಮಾಡಿಕೊಡುವಂತಿದೆ

ಯಾಕೆ ಇಂಥದುಡುಕು ಕೃಷ್ಣಯ್ಯಾ ನಿನ್ನ
ಗೇಕೆ ಇಂಥ ದುಡುಕು
ಪಾಕಶಾಸನ ವಂದ್ಯ ಪೋರತನಗಳು
ಸಾಕು ಸಾಕಯ್ಯ ಕೃಷ್ಣ

ಇದರಲ್ಲಿ ಹುಡುಗಾಟದ ಮಗುವಿಗೆ ದುಡುಕ ತನವನ್ನು ಬಿಡಲು ತಾಯಿ ಬುದ್ಧಿ ಹೇಳಿದ್ದು ಕಂಡು ಬರುತ್ತದೆ. ಈ ಕೀರ್ತನೆಯಲ್ಲಿ ಬಾಲ ಕೃಷ್ಣನ ಲೌಕಿಕ ಲೀಲೆಗಳ ಸರಸ ಸಮನ್ವಯವನ್ನು ಬಗೆದು ಚಿತ್ರಿಸಿದ್ದಾರೆ. ಮೊಸರು ಕದ್ದದ್ದು, ಪೂತನಾವಧೆ, ಕಂಸ ಸಂಹಾರ, ಯಮಳಾರ್ಜುನಬಂಧ ವಿಮೋಚನ, ಚಾಣೂರ ಮುಷ್ಟಿಕರವಧೆ, ಮೊದಲಾದವುಗಳನ್ನು ಬಾಲಕೃಷ್ಣನ ಲೀಲೆಗಳೊಂದಿಗೆ ಸಮನ್ವಯ ಗೊಳಿಸಿದ್ದಾರೆ. ಒಟ್ಟಿನಲ್ಲಿ ದಾಸ ಸಾಹಿತ್ಯದಲ್ಲಿ ವಾತ್ಸಲ್ಯ ಭಾವದ ಕೃತಿಗಳು ಆರಂಭದಲ್ಲಿ ಮೂಡಿ ಬಂದಿದ್ದ ಮುಂದಿನ ಹರಿದಾಸ ಪೀಳಿಗೆಗೆ ಪ್ರೋತ್ಸಾಹದ ಕೃತಿಗಳಾದವು. ವಾತ್ಸಲ್ಯ ಭಾವದ ಮೇಲೆ ನೂರಾರು ಕೃತಿ ರಚಿಸಿದ ಕೀರ್ತಿ ಪುರಂದರದಾಸರದಾದರೆ ಕೃಷ್ಣನ, ಬಾಲಲೀಲೆಯನ್ನೊಳಗೊಂಡ ಭಾಗವತ ದಶಮ ಸ್ಕಂಧ ಪೂರ್ವಾರ್ಧವನ್ನು ಕೀರ್ತನರೂಪದಲ್ಲಿ ಕನ್ನಡಿಸಿದ ಹಿರಿಮೆ ಪ್ರಸನ್ನವೆಂಕಟದಾಸರದಾಗಿದೆ.

ಇಂದಿನ ಗಣಿತ ಶಾಸ್ತ್ರಕ್ಕೆ ತಳಹದಿಯನ್ನು ಹಾಕಿಕೊಟ್ಟವರು ಹಿಂದುಗಳು ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ. ಗಣಿತಶಾಸ್ತ್ರದ ಚರಿತ್ರಕಾರನಾದ ಕೆಜೂರಿ ಎಂಬುವನು 'ಹಿಂದುಗಳು ಹಿಂದೆ ನಿರ್ಮಿಸಿದ ಅಂಕ ಚಿಹ್ನೆಗಳನ್ನೂ, ಅಂಕಗಣಿತ ಮಾರ್ಗಗಳನ್ನೂ ಇಂದೂ ನಾವು ಉಪಯೋಗಿಸುತ್ತಿದ್ದೇವೆ. ಅದು ಪರಿಪೂರ್ಣತೆಯನ್ನೂ ಹೊಂದಿರುವುದಲ್ಲದೆ ಹಿಂದುಗಳ ಕೌಶಲ್ಯವನ್ನು ಬಹುಸ್ಪಷ್ಟವಾಗಿ ಪ್ರದರ್ಶಿಸುತ್ತದೆ. ದಶಮಾಂಕ ಪದ್ಧತಿಯು ಪ್ರಾರಂಭವಾದುದು ಹಿಂದುಗಳಿಂದಲೇ. ಪ್ರಪಂಚಕ್ಕೆ ಸೊನ್ನೆಯನ್ನೂ ದಾನಮಾಡಿದ ಶಾಶ್ವತವಾದ ಕೀರ್ತಿ ಭರತವರ್ಷಕ್ಕೆ ಸಲ್ಲತಕ್ಕದ್ದಾಗಿದೆ,' ಎಂದು ಹೊಗಳಿದ್ದಾನೆ. ಅಲ್ಲದೆ ಅಂಕಗಳ ಹೆಸರನ್ನು ನಿರ್ಮಿಸಿ ಪರಿಷ್ಕರಿಸಿ ಅವುಗಳ ಸ್ಥಾನವನ್ನು ನಿಷ್ಕರ್ಷಿಸಿ ಗಣನೆಯ ಮಿತಿಯನ್ನು ವಿವಿಧ ಮಟ್ಟಕ್ಕೆ ಏರಿಸಿದ ಅವರ ಬುದ್ಧಿ ಶಕ್ತಿ ಅನ್ಯಾದೃಶವಾದುದು.

ವ್ಯವಹಾರ ಪ್ರಪಂಚದ ಗಣನೆಯ ಮಿತಿಗೂ ಗಣಿತಜ್ಞರು ನಿಷ್ಕರ್ಷಿಸಿರುವ ಈ ಗಣನೆಯ ಮಿತಿಗೂ ಬಹುಮಟ್ಟಿನ ಅಂತರವಿದೆ. ಜ್ಯೋತಿಶ್ಶಾಸ್ತ್ರದ ಪ್ರಕಾರ ಅಂಕಗಳ ಗಣನೆ ಪರಾರ್ಧದವರೆಗೆ ಬೆಳೆದಿದೆ. ಅದರ ವಿವರ ಕೆಳಗಿನ ಶ್ಲೋಕಗಳಲ್ಲಿ ಉಕ್ತವಾಗಿದೆ.

'ಶಬ್ದಾರ್ಥ ರತ್ನಾಕರ'ದ ಪ್ರಕಾರ ಸಂಖ್ಯಾಸ್ಥಾನಗಳು ೩೬. ಸಾಮಾನ್ಯವಾಗಿ ಬಳಕೆಯಲ್ಲಿರುವ ಶತಕೋಟಿಯಿಂದ (ಅಂದರೆ ಒಂದರ ಮುಂದೆ ಒಂಬತ್ತು ಸೊನ್ನೆಗಳು) ಮುಂದಕ್ಕೆ ಕೋಷ್ಟಕ ಹೀಗಿರುತ್ತದೆ.

ಹತ್ತು ಶತಕೋಟಿ ಒಂದು ಅರ್ಬುದ
ಹತ್ತು ಅರ್ಬುದ ಒಂದು ನ್ಯರ್ಬುದ
ಹತ್ತು ನ್ಯರ್ಬುದ ಒಂದು ಖರ್ವ
ಹತ್ತು ಖರ್ವ ಒಂದು ಮಹಾ ಖರ್ವ
ಹತ್ತು ಮಹಾಖರ್ವ ಒಂದು ಪದ್ಮ
ಹತ್ತು ಪದ್ಮ ಒಂದು ಮಹಾಪದ್ಮ
ಹತ್ತು ಮಹಾಪದ್ಮ ಒಂದು ಕ್ಷೋಣಿ
ಹತ್ತು ಕ್ಷೋಣಿ ಒಂದು ಮಹಾಕ್ಷೋಣಿ
ಹತ್ತು ಮಹಾಕ್ಷೋಣಿ ಒಂದು ಶಂಖ
ಹತ್ತು ಶಂಖ ಒಂದು ಮಹಾಶಂಖ
ಹತ್ತು ಮಹಾಶಂಖ ಒಂದು ಕ್ಷಿತಿ
ಹತ್ತು ಕ್ಷಿತಿ ಒಂದು ಮಹಾಕ್ಷಿತಿ
ಹತ್ತು ಮಹಾಕ್ಷಿತಿ ಒಂದು ಕ್ಷೋಭ

# ವಾನರ ಸೇನಾ ಸಂಖ್ಯಾ ವಿಚಾರ

ಏಕಂ ದಶ ಶತಮಸ್ಮಾತ್ ಸಹಸ್ರಮಯುತಂ ತತಃಪರಂ ಲಕ್ಷಂ
ಪ್ರಯುತಂ ಕೋಟಿ ಮಥಾರ್ಬುದ ವೃಂದಂ ಖರ್ವಂ ನಿಖರ್ವಂ ಚ
ತಸ್ಮಾನ್ಮಹಾಸರೋಜಂ ಶಂಕು ಸರಿತಾಂ ಪತಿಂ ತ್ವಂತಮ್
ಮಧ್ಯಂ ಪರಾರ್ಧಮಾಹುಃ ಯಥೋತ್ತರಂ ದಶಗುಣಂ
ತಥಾಜ್ಞೇಯಂ

ಇದರ ಪ್ರಕಾರ ಕೋಷ್ಟಕವು ಈ ರೀತಿ ಇರುತ್ತದೆ. ಹತ್ತು ಸಾವಿರವಾದ ಮೇಲೆ ಮುಂದಿನ ಕ್ರಮವು ಹೀಗಿದೆ.

ಹತ್ತು ಸಾವಿರ ಒಂದು ಅಯುತ
ಹತ್ತು ಅಯುತ ಒಂದು ಪ್ರಯುತ
ಹತ್ತು ಪ್ರಯುತ ಒಂದು ಅರ್ಬುದ
ಹತ್ತು ಅರ್ಬುದ ಒಂದು ನ್ಯರ್ಬುದ (ವೃಂದ)
ಹತ್ತು ವೃಂದ ಒಂದು ಖರ್ವ
ಹತ್ತು ಖರ್ವ ಒಂದು ನಿಖರ್ವ
ಹತ್ತು ನಿಖರ್ವ ಒಂದು ಮಹಾಸರೋಜ
ಹತ್ತು ಮಹಾಸರೋಜ ಒಂದು ಶಂಕು
ಹತ್ತು ಶಂಕು ಒಂದು ಸಮುದ್ರ
ಹತ್ತು ಸಮುದ್ರ ಒಂದು ಅಂತ್ಯ
ಹತ್ತು ಅಂತ್ಯ ಒಂದು ಮಧ್ಯ
ಹತ್ತು ಮಧ್ಯ ಒಂದು ಪರಾರ್ಧ

(ಪರಾರ್ಧವನ್ನು ಇಂದಿನ ಬೀಜಗಣಿತದ ಸಂಜ್ಞೆಯ ಪ್ರಕಾರ $10^{14}$ ಎಂದು ಸೂಚಿಸಬಹುದು.)

ಹತ್ತು ಕ್ಷೋಭ ಒಂದು ಮಹಾಕ್ಷೋಭ
ಹತ್ತು ಮಹಾಕ್ಷೋಭ ಒಂದು ನಿಧಿ
ಹತ್ತು ನಿಧಿ ಒಂದು ಮಹಾನಿಧಿ
ಹತ್ತು ಮಹಾನಿಧಿ ಒಂದು ಪರ್ವತ
ಹತ್ತು ಪರ್ವತ ಒಂದು ಅತ್ಯಂತ
ಹತ್ತು ಅತ್ಯಂತ ಒಂದು ಪರಾರ್ಧ
ಹತ್ತು ಪರಾರ್ಧ ಒಂದು ಅನಂತ
ಹತ್ತು ಅನಂತ ಒಂದು ಸಾಗರ
ಹತ್ತು ಸಾಗರ ಒಂದು ಅವ್ಯಯ
ಹತ್ತು ಅವ್ಯಯ ಒಂದು ಅಚಿಂತ್ಯ
ಹತ್ತು ಅಚಿಂತ್ಯ ಒಂದು ಅಮೇಯ
ಹತ್ತು ಅಮೇಯ ಒಂದು ಭೂರಿ
ಹತ್ತು ಭೂರಿ ಒಂದು ಮಹಾಭೂರಿ $10^{35}$

ವಿವೇಕಚಿಂತಾಮಣಿಯಲ್ಲಿ ಸಾಗರವಾದಮೇಲೆ ಮುಂದಿನ ಸ್ಥಾನಗಳು ಉಕ್ತವಾಗಿವೆ.

ಹತ್ತು ಸಾಗರ ಒಂದು ಮಹಾಸಾಗರ
ಹತ್ತು ಮಹಾಸಾಗರ ಒಂದು ಹರಿ
ಹತ್ತು ಹರಿ ಒಂದು ಮಹಾಹರಿ

ಡಾ॥ ಎನ್. ಅನಂತರಂಗಾಚಾರ್

ಹತ್ತು ಮಹಾಹರಿ ಒಂದು ಶಂಖೆ
ಹತ್ತು ಶಂಖೆ ಒಂದು ಮಹಾಶಂಖೆ
ಹತ್ತು ಮಹಾಶಂಖೆ ಒಂದು ಫಣಿ
ಹತ್ತು ಫಣಿ ಒಂದು ಮಹಾಫಣಿ
ಹತ್ತು ಮಹಾಫಣಿ ಒಂದು ಕ್ರಮ
ಹತ್ತು ಕ್ರಮ ಒಂದು ಮಹಾಕ್ರಮ $10^{39}$

ಈ ಗಣನೆ ಜ್ಯೋತಿಶ್ಶಾಸ್ತ್ರದ 'ಪರಾರ್ಧ' ಮಿತಿಯನ್ನು ಬಹುಮಟ್ಟಿಗೆ ಮೀರಿದೆ.

ಶ್ರೀಮದ್ರಾಮಾಯಣದ ಯುದ್ಧಕಾಂಡದ ೨೮ ನೆಯ ಸರ್ಗದಲ್ಲಿ ಶ್ರೀರಾಮನ ಸೈನ್ಯದಲ್ಲಿರುವ ವಾನರ ಸೈನ್ಯದ ಪ್ರಮಾಣವನ್ನು ವಿವರಿಸುವ ಸಂದರ್ಭದಲ್ಲಿ ಸಂಬಂಧಪಟ್ಟ ಕೋಷ್ಟಕವನ್ನು ಈ ಮುಂದಿನ ಶ್ಲೋಕಗಳಲ್ಲಿ ತಿಳಿಸಿದೆ :–

ಶತಂ ಶತಸಹಸ್ರಾಣಾಂ ಕೋಟಿಮಾಹು ರ್ಮನೀಷಿಣಃ
ಶತಂ ಕೋಟಿ ಸಹಸ್ರಾಣಾಂ ಶಂಖ ಇತ್ಯಭಿಧೀಯತೆ।
ಶತಂ ಶಂಖ ಸಹಸ್ರಾಣಾಂ ಮಹಾಶಂಖ ಇತಿ ಸ್ಮೃತಮ್
ಮಹಾಶಂಖ ಸಹಸ್ರಾಣಾಂ ಶತಂ ಬೃಂದ ಮಿತಿ ಸ್ಮೃತಮ್
ಶತಂ ಬೃಂದ ಸಹಸ್ರಾಣಾಂ ಮಹಾಬೃಂದ ಇತಿ ಸ್ಮೃತಮ್
ಮಹಾಬೃಂದ ಸಹಸ್ರಾಣಾಂ ಶತಂ ಪದ್ಮ ಇತಿ ಸ್ಮೃತಮ್
ಶತಂ ಪದ್ಮ ಸಹಸ್ರಾಣಾಂ ಮಹಾಪದ್ಮ ಇತಿ ಸ್ಮೃತಮ್
ಮಹಾಪದ್ಮ ಸಹಸ್ರಾಣಾಂ ಶತಂ ಖರ್ವ ಮಿಹೋಚ್ಯತೇ
ಶತಂ ಖರ್ವ ಸಹಸ್ರಾಣಾಂ ಮಹಾಖರ್ವ ಮಿತಿ ಸ್ಮೃತಮ್
ಮಹಾಖರ್ವ ಸಹಸ್ರಾಣಾಂ (ಶತಂ) ಸಮುದ್ರ ಮಭಿಧೀಯತೇ
ಶತಂ ಸಮುದ್ರಸಾಹಸ್ರಂ ಓಘ ಇತ್ಯಭಿಧೀಯತೇ
ಶತ ಮೋಘಸಹಸ್ರಾಣಾಂ ಮಹೌಘ ಇತಿ ವಿಶ್ರುತಃ

ಇದರ ಪ್ರಕಾರ ಅಂಕಗಳ ಕೋಷ್ಟಕ ಹೀಗಾಗುತ್ತದೆ :–

ನೂರು ಲಕ್ಷಗಳು ಒಂದು ಕೋಟಿ
ಒಂದು ಲಕ್ಷ ಕೋಟಿಗಳು ಒಂದು ಶಂಖ
ಒಂದು ಲಕ್ಷ ಶಂಖಗಳು ಒಂದು ಮಹಾಶಂಖ
ಒಂದು ಲಕ್ಷ ಮಹಾಶಂಖಗಳು ಒಂದು ಬೃಂದ
ಒಂದು ಲಕ್ಷ ಬೃಂದಗಳು ಒಂದು ಮಹಾಬೃಂದ
ಒಂದು ಲಕ್ಷ ಮಹಾಬೃಂದಗಳು ಒಂದು ಪದ್ಮ
ಒಂದು ಲಕ್ಷ ಪದ್ಮಗಳು ಒಂದು ಮಹಾಪದ್ಮ
ಒಂದು ಲಕ್ಷ ಮಹಾಪದ್ಮ ಒಂದು ಖರ್ವ
ಒಂದು ಲಕ್ಷ ಖರ್ವಗಳು ಒಂದು ಮಹಾಖರ್ವ
ಒಂದು ಲಕ್ಷ ಮಹಾಖರ್ವಗಳು ಒಂದು ಸಮುದ್ರ
ಒಂದು ಲಕ್ಷ ಸಮುದ್ರಗಳು ಒಂದು ಓಘ
ಒಂದು ಲಕ್ಷ ಓಘಗಳು ಒಂದು ಮಹೌಘ $= 10^{62}$

ಈ ಗಣನೆಯಲ್ಲಿ ರಾಮನ ವಾನರ ಸೇನೆಯ ಪ್ರಮಾಣ ಈ ರೀತಿಯದು :–

ಏವಂ ಕೋಟಿ ಸಹಸ್ರೇಣ ಶಂಖಾನಾಂ ಚ ಶತೇನ ಚ
ಮಹಾಶಂಖ ಸಹಸ್ರೇಣ ತಥಾ ಪದ್ಮ ಶತೇನ ಚ
ಮಹಾಪದ್ಮ ಸಹಸ್ರೇಣ ತಥಾ ಖರ್ವ ಶತೇನ ಚ
ಸಮುದ್ರೇಣ ಶತೇ ನೈವ ಮಹೌಘೇನ ತಥೈವ ಚ
ಏವಂ ಕೋಟಿ ಮಹೌಘೇನ ಸಮುದ್ರ ಸದೃಶೇನ ಚ

ಅಂದರೆ,

೧೦೦ ಮಹೌಘ $= 10^{64}$

ಈ ಎಲ್ಲದರ ಒಟ್ಟು ವಾನರ ಸೈನ್ಯದ ಸಂಖ್ಯೆ. ಇದನ್ನು ಬಾಯಲ್ಲಿ ಹೇಳುವುದಕ್ಕಾಗಲಿ, ಮನಸ್ಸಿನಲ್ಲಿ ಊಹಿಸುವುದಕ್ಕಾಗಲಿಸಾಧ್ಯವಿಲ್ಲ. ಪ್ರಪಂಚದಲ್ಲಿ ಈ ಸಂಖ್ಯೆಯ ಅಸ್ತಿತ್ವಕ್ಕೆ ಸಾಧ್ಯವಿಲ್ಲ. ಈಗಿನ ವೈಜ್ಞಾನಿಕ ಸಂಶೋಧನೆಯ ಪ್ರಕಾರ ಭೂಮಂಡಲದ ಮೇಲ್ಮೈಯ ವಿಸ್ತೀರ್ಣ $4\pi r^2$ ಭೂಮಿಯ ತ್ರಿಜ್ಯವನ್ನು ಸುಮಾರು 4000 (3960) ಮೈಲಿಗಳೆಂದು ಇಟ್ಟುಕೊಂಡರೆ ಅದರ ವಿಸ್ತೀರ್ಣವು $(125664) \times 16 \times 10^6$ ಚದರ ಮೈಲಿಗಳು ಅಥವಾ $(20106224) \times 16 \times 10^6$ ಚದರ ಅಂಗುಲಗಳಾಗುತ್ತವೆ. ಆ ಸಂಖ್ಯೆ $10^{21}$ ಆಗುತ್ತದೆ. ಅಖಂಡ ಭೂಮಂಡಲದ ಮೇಲ್ಮೈಯ ಒಂದೊಂದು ಅಂಗುಲಕ್ಕೆ ಒಂದು ಕಪಿಯನ್ನು ನಿಲ್ಲಿಸಿದರೂ ಆ ಸಂಖ್ಯೆ ($10^{21}$)ಯು ಮೇಲಿನ ಕೋಷ್ಟಕದಲ್ಲಿ ಒಂದು ಮಹಾಶಂಖಕ್ಕಿಂತ ಕಡಿಮೆಯಾಗುತ್ತದೆ. ಉಳಿದ ಸಂಖ್ಯೆ ನಿಲ್ಲುವುದಕ್ಕೆ ಭೂಮಂಡಲದಲ್ಲಿ ಸ್ಥಳವೆಲ್ಲಿದೆ ? ರಾಕ್ಷಸರ ಸೇನೆಯ ಸಂಖ್ಯಾಬಲವೆಷ್ಟು ? ಲಂಕಾನಗರದಲ್ಲಿದ್ದ ಸ್ತ್ರೀಬಾಲಾದಿ ಇತರ ಪ್ರಜೆಗಳ ಸಂಖ್ಯೆಯೆಷ್ಟು ? ಅದೂ ಭಾರತದ ಏಕದೇಶವಾದ ಲಂಕಾದ್ವೀಪದಲ್ಲಿ ಇಷ್ಟು ಸಂಖ್ಯೆಯಿರಲು ಅವಕಾಶವಿದ್ದರೆ ಆಗಿನ ಭೂಮಂಡಲದ ವಿಸ್ತಾರವೆಷ್ಟು ? ಸಾಮಾನ್ಯ ವ್ಯವಹಾರ ದೃಷ್ಟಿಯಿಂದ ಇದನ್ನು ಊಹಿಸುವುದೂ ಅಸಾಧ್ಯವಾಗಿದೆ. ದೃಗ್ಗೋಚರಮಾಡಿಸುವುದಂತೂ ಅಸಾಧ್ಯವಾದ ಕೆಲಸ. ಆ ಯುಗದ ಭೂಮಂಡಲದ ಪ್ರಮಾಣವೇ ವ್ಯತ್ಯಾಸವಾಗಿದ್ದಿತೋ ಅಥವಾ ಈ ಸಂಖ್ಯೆಗಳಿಗೆ ಮತ್ತೇನಾದರೂ ಸಂಕೇತವಿದ್ದೀತೋ ತಿಳಿಯುವುದು ಕಷ್ಟ. ಬಲ್ಲವರು ತಿಳಿಸಿದರೆ ಬಹಳ ಉಪಕಾರವಾಗುತ್ತದೆ. ಇಷ್ಟುಮಾತ್ರ ನಿಜ. ಈ ಗಣನಾಕ್ರಮ ಹಿಂದುಗಳ ಅದ್ಭುತ ಕಲ್ಪನಾಶಕ್ತಿಯ ವೈಭವವನ್ನು ಪ್ರದರ್ಶಿಸುವುದರಲ್ಲಿ ಸಂದೇಹವಿಲ್ಲ.

ಅಜನು ಇಪ್ಪತ್ತುಸಾವಿರ ವರ್ಷಗಳು, ದಶರಥನು ಅರವತ್ತು ಸಾವಿರ ವರ್ಷಗಳು, ರಾಮನು ಹನ್ನೊಂದುಸಾವಿರ ವರ್ಷಗಳು ಬದುಕಿದ್ದರೆಂದೂ, ಅವರೆಲ್ಲರಿಗೂ ವಸಿಷ್ಠರು ಪುರೋಹಿತರಾಗಿದ್ದರೆಂದೂ, ನಾಲ್ಕು ದಿನಗಳಲ್ಲಿ ೧೨೦೦ ಮೈಲಿ ದೂರದ ಸೇತುವೆಯನ್ನು ನಿರ್ಮಿಸಲಾಯಿತೆಂದೂ, ಒಂದು ರಾತ್ರಿಯಲ್ಲಿ ಆಂಜನೇಯನು ಹಿಮವತ್ಪರ್ವತದಲ್ಲಿದ್ದ ಓಷಧೀಪರ್ವತವನ್ನು ತಂದು ಪುನಃ ಹಿಂದಕ್ಕೆ ತೆಗೆದುಕೊಂಡು ಹೋಗಿ ಇಟ್ಟನೆಂದೂ, ಉಕ್ತವಾಗಿರುವ ಭಾವನೆಗಳ ಹಿನ್ನೆಲೆಯಲ್ಲಿ ಈ ಸಂಖ್ಯಾಗಣನೆಯೂ ಆಶ್ಚರ್ಯವಾಗಿ ಕಾಣಬೇಕಾಗಿಲ್ಲ.

# ಪ್ರಾಚೀನ ಕಾಲದ ಕನ್ನಡ ಕವಯಿತ್ರಿಯರು

ಕನ್ನಡ ನಾಡಿನ ಸಾಹಿತ್ಯ ಚರಿತ್ರೆಯ ಪರಂಪರೆಯಲ್ಲಿ ಪುರುಷರಂತೆಯೇ ಸ್ತ್ರೀಯರೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಮಹಿಳೆಯರು ಮುಂದೆ ಬಾರದೆ ಇರುವಂತಹ ಸನ್ನಿವೇಶಗಳಿದ್ದಾಗಲೂ ಆ ಬಂಧನಗಳನ್ನು ಕಿತ್ತೊಗೆದು, ಸಾಮಾಜಿಕವಾಗಿ ಸ್ತ್ರೀಯರಿಗೆ ಆಗುತ್ತಿರುವ ಅನ್ಯಾಯಗಳನ್ನು ಪ್ರತಿಭಟಿಸಿದ ಧೀಮಂತ ನಾರಿಯರಿದ್ದಾರೆ. ಪುರುಷರಿಗೆ ತಾವು ಯಾವುದರಲ್ಲಿಯೂ ಕೀಳಾಗಿಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಒಟ್ಟು ಸಾಹಿತ್ಯ ಚರಿತ್ರೆಯಲ್ಲಿ ಅನೇಕ ಕವಯಿತ್ರಿಯರ ಉಲ್ಲೇಖ ಕಂಡುಬರುತ್ತದೆ. ಈ ಪ್ರಾಚೀನ ಕವಯಿತ್ರಿಯರು ಕನ್ನಡ –ಸಂಸ್ಕೃತ ಭಾಷೆಗಳಲ್ಲಿ ಆಗಾಧವಾದ ಪಾಂಡಿತ್ಯವನ್ನು ಪಡೆದವರಾಗಿದ್ದರು. ಅವರು ನಿರ್ಮಿಸಿದ ಸಾಹಿತ್ಯ ಕೃತಿಗಳ ವಿಷಯವನ್ನೂ ಸಾಹಿತ್ಯ ಚರಿತ್ರೆಗೆ ಆ ಕವಯಿತ್ರಿಯರ ಕೊಡುಗೆಗಳೇನೆಂಬುದನ್ನೂ ಇಲ್ಲಿ ಪ್ರಸ್ತಾಪಿಸಲಾಗಿದೆ.

ಬಾದಾಮಿಯ ಚಾಲುಕ್ಯರ ಇತಿಹಾಸವನ್ನು ಗಮನಿಸಿದಾಗ 'ವಿಜಯಭಟ್ಟಾರಿಕೆ' ಎಂಬ ಕವಯಿತ್ರಿಯ ಉಲ್ಲೇಖ ದೊರೆಯುತ್ತದೆ. ವಿಜಯಭಟ್ಟಾರಿಕೆಗೆ 'ವಿಜ್ಜಿಕೆ' ಎಂಬ ಹೆಸರು ಇದ್ದಿತಂತೆ! ವಿಜ್ಜಿಕೆ ಮಹಾರಾಣಿಯು ಹೌದು! ಅಪ್ರತಿಮ ವಿದ್ವತ್ತಿನಿಂದ ಕೂಡಿದ ಪಂಡಿತೆಯೂ ಹೌದು! 'ಕೌಮುದೀ ಮಹೋತ್ಸವ'ವೆಂಬ ಕೃತಿಯ ಕರ್ತೃತ್ವವನ್ನು ವಿಜ್ಜಿಕೆಗೆ ಆರೋಪಿಸಲಾಗಿದೆ. ಸಂಸ್ಕೃತ ಭಾಷೆಯಲ್ಲಿ ಈ ಕೃತಿ ರಚಿತಗೊಂಡಿದೆ. ತನ್ನ ಪಾಂಡಿತ್ಯದ ಬಗೆಗೆ ಅಪಾರವಾದ ಅಭಿಮಾನವನ್ನುಳ್ಳ ವಿಜ್ಜಿಕೆ 'ದಂಡಿ' ಎಂಬ ಮಹಾಕವಿ ಸರಸ್ವತಿದೇವಿಯನ್ನು 'ಸರ್ವಶುಕ್ಲಾ ಸರಸ್ವತೀ' ಎಂದು ಹೊಗಳಿರುವುದನ್ನು ಕಂಡು ಹಾಸ್ಯ ಮಾಡಿದ್ದಾಳೆ. ವಿಜ್ಜಿಕೆ ಸರಸ್ವತಿಯ ಪ್ರತಿರೂಪವೋ ಎಂಬಂತೆ ಇದ್ದಳಂತೆ. ವಿಜ್ಜಿಕೆಯ ಪ್ರತಿಭಾ ಕೌಶಲ್ಯವನ್ನು ಕುರಿತು ರಾಜಶೇಖರನೆಂಬ ಕವಿಯು ಕಾಳಿದಾಸನ ನಂತರ ವೈದರ್ಭಿ ಶೈಲಿಯಲ್ಲಿ ವಿಜ್ಜಿಕೆಯಷ್ಟು ಸೊಗಸಾಗಿ ಬೇರೆ ಯಾರೂ ಕೃತಿಗಳನ್ನೇ ರಚಿಸಿಲ್ಲ ಎಂದಿದ್ದಾನೆ.

ಸರಸ್ವತೀವ ಕರ್ಣಾಟೀ
ವಿಜಯಾಂಕಾ ಜಯತ್ಯಸೌ।
ಯಾ ವೈದರ್ಭ ಗಿರಾಂ ವಾಸಃ
ಕಾಳಿದಾಸಾದನಂತರಂ॥

ಹೀಗೆಂದು ರಾಜಶೇಖರನೇ ಪ್ರಶಂಸಿದಾಗ ವಿಜ್ಜಿಕೆಯು ಎಂತಹ ವಿದ್ವನ್ಮಣಿಯಾಗಿದ್ದಳೆಂಬುದು ತಿಳಿದು ಬರುತ್ತದೆ.

ಹೊಯ್ಸಳರ ಕಾಲದಲ್ಲಿ ಕಂತಿ ಎಂಬ ಕವಯಿತ್ರಿ ಇದ್ದ ವಿಚಾರವಿದೆ. ಕನ್ನಡದ ಪ್ರಥಮ ಕವಯಿತ್ರಿಯಾದ ನಾಗಚಂದ್ರನ ಸಮಕಾಲೀನಳು. ಮಹಿಳೆಯರು ಸಾಹಿತ್ಯವನ್ನು ರಚಿಸದಿದ್ದ ಕಾಲದಲ್ಲಯೇ ವಿದ್ಯಾವತಿಯಾಗಿದ್ದು, ಪಂಡಿತೆಯಾಗಿದ್ದು ಕಂತಿ, ನಾಗಚಂದ್ರನಂತಹ ಕವಿ ದಿಗ್ಗಜನು ಹಾಕುತ್ತಿದ್ದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ನೀಡುತ್ತಿದ್ದಳಂತೆ. ನಾಗಚಂದ್ರನು ಅರ್ಧವಾಡಿ ಬಿಟ್ಟ ಸಮಸ್ಯೆಗಳೆಲ್ಲವನ್ನೂ ಪೂರ್ಣ ಮಾಡುತ್ತಿದ್ದಳಂತೆ! "ಕಂತಿ ಹಂಪನ ಸಮಸ್ಯೆಗಳು" ಎಂಬ ಪುಸ್ತಕದಲ್ಲಿ ನಾಗಚಂದ್ರ ಹಾಗೂ ಕಂತಿಯರ ಪದ್ಯಗಳಿವೆ. 'ನನಿಗೆ ನಮಸ್ಕಾರ ಮಾಡಿದರೆ ಕೈವಲ್ಯ ಸಿಗುತ್ತದೆ' ಎಂದು ನಾಗಚಂದ್ರನೆಂದರೆ 'ನಿನಗೆ ನಮಸ್ಕಾರ ಮಾಡಿದರೆ ಅಲ್ಲ, ಜಿನನಿಗೆ ನಮಸ್ಕಾರ ಮಾಡಿದರೆ ಕೈವಲ್ಯ ಪ್ರಾಪ್ತವಾಗುವುದು' ಎಂದಳಂತೆ ಕಂತಿ.

ನಾಗಚಂದ್ರ ಒಂದು ಸಲ ಕಂತಿಗೆ ಹೇಳಿದ 'ದನಗಳನ್ನು ಕಡಿದು ಕಡಿದು ಬಸದಿಗೆ ಎಳೆಯುತ್ತಿದ್ದರು' ಎಂದು. ಅಹಿಂಸೆಯೇ ಮೂಲಭೂತ ಅಂಶವಾಗಿರುವ ಜೈನಧರ್ಮದಲ್ಲಿ, ಅದೂ ಜೈನ ಬಸದಿಗೆ ಕಡಿದು ಹಾಕಲು ಸಾಧ್ಯವೇ? –ಕಂತಿ ಕೂಡಲೇ ಹೇಳಿದಳು. ಕಾಡಿನಲ್ಲಿ ಎಲ್ಲಾ ಕಡೆಗೂ ಸುಗಂಧ ಬೀರುವಂತಹ ಚಂದನದ ಗಿಡಗಳನ್ನು ಕತ್ತರಿಸಿ ಬಸದಿಗೆ ಹಾಕುತ್ತಿದ್ದರು–ಎಂದು.

ಸತ್ತವಳು ಎದ್ದು ಓಡಿಹೋದವಳು ಏನಿದು ಚಿತ್ರ? ಎಂದು ನಾಗಚಂದ್ರ ಕೇಳಿದಾಗ ಕಂತಿ ಹೇಳಿದಳಂತೆ ಸತ್ತವಳಲ್ಲ –ಬೇಸತ್ತವಳು ಎದ್ದು ಚಿತ್ರವನ್ನು ನೋಡಲಾರದೇ ಓಡಿಹೋದಳು- ಎಂದು. ಹಾಗಾದರೆ ಅಷ್ಟು ಸುಂದರವಾದ ಚಿತ್ರವನ್ನು ಚಿತ್ರಗಾರ ಬಿಡಿಸಿರಲಿಲ್ಲವೆಂದಾಯಿತು.

ಬಾಹುಬಲಿ ಎಂಬ ಕವಿ ತನ್ನ 'ನಾಗಕುಮಾರ ಚರಿತೆ' ಯಲ್ಲಿಯೂ ದೇವಚಂದ್ರನು ತನ್ನ 'ರಾಜಾವಳೀ ಕಥೆ'ಯಲ್ಲಿಯೂ ಕಂತಿಯ ಉಲ್ಲೇಖವನ್ನು ಮಾಡಿದ್ದಾರೆ.



ಎಲ್ಲಾ ವಿಷಯಗಳಲ್ಲಿಯೂ ಗೆಲ್ಲುತ್ತಿದ್ದ, ಎಲ್ಲಾ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಹೇಳುತ್ತಿದ್ದ ಕಂತಿಯಂಥವಳಿಂದ ತಾನು ಹೊಗಳಿಸಿಕೊಳ್ಳಬೇಕೆಂಬ ಬಯಕೆ ನಾಗಚಂದ್ರನಿಗುಂಟಾಯಿತು. ನಾಗಚಂದ್ರನನ್ನು ಸುಮ್ಮ ಸುಮ್ಮನೆ ಹೊಗಳುವಳೇ ಕಂತಿ! ಅದಕ್ಕೆ ನಾಗಚಂದ್ರ ಉಪಾಯವೊಂದನ್ನು ಮಾಡಿದ. ತಾನು ಸತ್ತಂತೆ ನಟಿಸಿದ. ದೂತನ ಮೂಲಕ ವಿಷಯ ಕಂತಿಗೆ ತಿಳಿಯುವಂತೆ ಮಾಡಿದ. ದೂತನಿಂದ ವಿಷಯ ತಿಳಿದ ಕಂತಿ ಓಡಿ ಬಂತು ಶವದ ಮುಂದೆ ಕುಳಿತಳು, ಪ್ರಲಾಪಿಸುತ್ತ ನಾನಾವಿಧವಾಗಿ ಪ್ರಶಂಶಿಸಿದಳು, ನಾಗಚಂದ್ರ ಎದ್ದು ಕುಳಿತ. ಕಂತಿಗೂ ಹರ್ಷವಾಯಿತು. ಈ ಪ್ರಸಂಗದಲ್ಲಿನ ಶೋಕಗೀತೆಗಳು ಬಹು ಸೊಗಸಾದುದೆಂದೂ ಒಂದು ದಂತ ಕಥೆ ತಿಳಿಸುತ್ತದೆ.

ಕಂತಿಯಂತಹ ಕವಯಿತ್ರಿಯೊಬ್ಬಳ ಬಗೆಗಿನ ಇಂಥಹ ದಂತ ಕಥೆಗಳನ್ನು ನೋಡಿದಾಗ ಆ ಕಾಲಕ್ಕಾಗಲೆ ಮಹಿಳೆಯೊಬ್ಬಳು ವಿದ್ವಾಂಸನಾದ ಕವಿಯೊಬ್ಬನ ಸರಿಸಾಟಿಯಾಗಿ ಅವನು ಕೇಳಿದ ಪ್ರಶ್ನೆಗಳಿಗೆಲ್ಲಾ ತನ್ನ ಬುದ್ಧಿಚಾತುರ್ಯದಿಂದ ಉತ್ತರಗಳನ್ನು ನೀಡುತ್ತಿದ್ದ ವಿಷಯ ಆಶ್ಚರ್ಯಕರವಾಗಿದೆ. ಕಂತಿಯ ನಿದರ್ಶನದಿಂದ ಹಿಂದಿನ ಕಾಲದಲ್ಲಿ ಮಹಿಳೆಯರೂ ಎಂಥಹ ಬುದ್ಧಿಶಾಲಿಗಳಾಗಿದ್ದರೆಂಬುದು ತಿಳಿಯುತ್ತದೆ.

ಕಂತಿ ಎಂಬ ಕವಯಿತ್ರಿ ಇಲ್ಲ ಎಂದು ಊಹೆ ಪಟ್ಟಿದ್ದರೂ ಸಹ ದಂತಕತೆಗಳಲ್ಲಿಯೂ ನಿಜವಿರ

ಶ್ರೀ ಕೆ. ರಮಾನಂದ

ಬಲ್ಲದೆಂಬ ಅಂಶ ಇಲ್ಲಿ ಗಮನಾರ್ಹವಾದ ವಿಚಾರವಾಗುತ್ತದೆ. ಇನ್ನೂ ಪ್ರಬಲವಾದ ಪ್ರಮಾಣಗಳು ಕಂತಿಯ ವಿಚಾರದ ಬಗೆಗೆ ಸಿಕ್ಕಿದಾಗ ಮಾತ್ರ ಕಂತಿಯ ಅಸ್ತಿತ್ವ ಸಾಹಿತ್ಯದಲ್ಲಿ ಸತ್ಯವಾಗಬಲ್ಲದು ಎಂದು ಹೇಳುವುದು ಸೂಕ್ತವಾಗುತ್ತದೆ. ಯಾವುದು ಹೇಗಾದರೂ ಇರಲಿ ಒಟ್ಟಾರೆಯಾಗಿ ಕನ್ನಡದ ಪ್ರಥಮ ಕವಯಿತ್ರಿಯೆಂದು ಕರೆಸಿಕೊಳ್ಳುವ ಭಾಗ್ಯ ಕಂತಿಯದಾಗಿದೆ.

ವಚನ ಸಾಹಿತ್ಯ ಪರಂಪರೆಯಲ್ಲಿ ಸ್ತ್ರೀಯರು ತೋರಿಸಿದ ಆತ್ಮಜಾಗೃತಿ, ಹಿಂದೂ ಧರ್ಮದ ಉನ್ನತಿಗಾಗಿ ಹೋರಾಡಿದ ಪರಿ, ಅವರು ನಿರ್ಮಿಸಿದ ಸಾಹಿತ್ಯ ಮೊದಲಾದವುಗಳು ಮೆಚ್ಚತಕ್ಕವಾಗಿವೆ. ಅನೇಕ ವಚನಗಳನ್ನು ರಚಿಸಿದ ವಚನಕಾರ್ತಿಯರು 'ವಚನ ವಾಙ್ಮಯ'ದಲ್ಲಿ ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ತಾವು ಯಾವುದರಲ್ಲಿಯೂ ಹಿಂದಿಲ್ಲ –ತಾವೂ ಆತ್ಮಜ್ಞಾನವನ್ನು ಪಡೆದು ಮೋಕ್ಷ ಸಾಧಕಿಯರಾಗಬೇಕು ಎಂಬ ಪ್ರಬಲವಾದ ಹಂಬಲ ಈ ವಚನಕಾರ್ತಿಯರಲ್ಲಿ ಇದ್ದಂತೆ ಕಾಣುತ್ತದೆ. ಹಾಗೆಂದು ಈ ವಚನಕಾರ್ತಿಯರು ತಮ್ಮ ಕಾಯಕವನ್ನು ಬಿಟ್ಟು ಬೇರೆಡೆಗೆ ಹೋಗಬೇಕಾದ ಪ್ರಸಂಗ ಬರಲಿಲ್ಲ. ಕಾಯಕನಿಷ್ಠೆಯನ್ನು ಕಾಪಾಡಿಕೊಂಡು ಬಂದ ಶಿವಶರಣರಂತೆ ಈ ವಚನಕಾರ್ತಿಯರೂ ಕಾಯಕನಿಷ್ಠೆಯನ್ನುಳಿಸಿಕೊಂಡು ಬರುವಲ್ಲಿ ಸಫಲಾಗಿದ್ದರು. ನಾನಾ ಜಾತಿ –ವರ್ಣಗಳಿಂದ ಬಂದ ಈ ವಚನಕಾರ್ತಿಯರು ಇಷ್ಟಲಿಂಗ ಧಾರಣೆಯನ್ನು ಮಾಡಿಕೊಂಡು ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಚರ್ಚಾಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರಂತೆ. ಅಕ್ಕಮಹಾದೇವಿಯಂತಹ ಶಿವಶರಣೆಯ ಬಾಳು –ಜ್ಞಾನಮಯವಾದ ಬಾಳು–ಇತರ ಸ್ತ್ರೀಯರಿಗೆ ಆದರ್ಶವೂ, ಕ್ರಾಂತಿದಾಯಕವೂ ಆಗಿ ಕಂಡಿರಲಿಕ್ಕೂ ಸಾಕು. ಸ್ತ್ರೀಯರು ತಾವು ನಂಬಿಕೊಂಡ ಕಾಯಕನಿಷ್ಠೆಯ ಜೊತೆ ಜೊತೆಯಾಗಿಯೇ ವಚನಗಳನ್ನು ರಚಿಸಿದರು. ವಚನಕಾರ್ತಿಯರು ರಚಿಸಿದ ವಚನಗಳಿಗೆ ತಮ್ಮದೇ ಆದ ಮಹತ್ವವಿದೆ, ಲೋಕಾನುಭವವಿದೆ, ಹಾಗೂ ನೈಜವಾದ ಅಂತರಂಗದ ಆನಂದವಿದೆ ಎಂದು ಹೇಳಿದರೆ ಅದು ಅತಿಶಯವಾದ ವಿಚಾರವಾಗುವುದಿಲ್ಲ. ನಿಜಕ್ಕೂ ವಚನಯುಗದಲ್ಲಿ ಮೂಡಿಬಂದ ಅನೇಕ ವಚನಕಾರ್ತಿಯರ ವಚನಗಳು, ಅವು ರಚಿತವಾದ ಉದ್ದೇಶದ ಹಿನ್ನೆಲೆಯಿಂದ ಬಹಳ ಮಹತ್ವಪೂರ್ಣವಾದುದಾಗುತ್ತವೆ. ದೊರೆತ ವಚನಗಳ ಆಧಾರದಿಂದ ಹೇಳುವುದಾದರೆ ಶರಣಸತಿ ಲಿಂಗಪತಿಯ ಭಾವವೂ, ಕಾಯಕದ ಮಹತ್ವವೂ ಈ ವಚನಗಳಲ್ಲಿ ಅಡಕಗೊಂಡಿದೆ ಎನ್ನಬಹುದು.

ನಾನಾ ಕಸುಬುಗಳನ್ನು ಮಾಡಿಕೊಂಡಿದ್ದು ವಚನ ರಚಿಸಿ ಶಿವಶರಣೆಯರೆಂಬ ಪಟ್ಟವನ್ನು ಪಡೆದುಕೊಂಡ ಈ ವಚನಕಾರ್ತಿಯರ ಪರಿಚಯವನ್ನು ಮಾಡಿಕೊಡುವುದು ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ, ಧರ್ಮದೃಷ್ಟಿಯಿಂದ ಅತ್ಯವಶ್ಯಕವಾಗಿದೆ.

ಶಿವಶರಣೆಯರಿಗೆಲ್ಲಾ ಶಿರೋಮಣಿಯಂತಿದ್ದವಳು ಅಕ್ಕಮಹಾದೇವಿ. ಸಾಹಿತ್ಯದ ಇತಿಹಾಸದಲ್ಲಿ, ಸಾಂಸ್ಕೃತಿಕ ಪರಂಪರೆಯಲ್ಲಿ ಅಕ್ಕಮಹಾದೇವಿ ಗಣ್ಯಸ್ಥಾನವನ್ನು ಪಡೆದು ಕೊಂಡಿದ್ದಾಳೆ. ಸ್ತ್ರೀಯರು ಸಮಾಜದಲ್ಲಿ ನಿಮ್ನ ಸ್ಥಾನವನ್ನು ಪಡೆದಿದ್ದಾಗ ಕ್ರಾಂತಿಕಾರಕವಾಗಿ ಹೋರಾಡಿ ಸಮಾಜವನ್ನು ಧಿಕ್ಕರಿಸಿ, ಪುರುಷನಷ್ಟೇ ಸ್ತ್ರೀಯೂ ಎಲ್ಲದರಲ್ಲಿಯೂ ಸಮಾನಳಾಗಿರಬಲ್ಲಳು ಎಂದು ತೋರಿಸಿಕೊಟ್ಟವಳು ಅಕ್ಕಮಹಾದೇವಿ. ಅಕ್ಕಮಹಾದೇವಿಯನ್ನು, ಹೆಣ್ಣಿನ ಸ್ವಾತಂತ್ರ್ಯ ಪರಮಾರ್ಥ ಸಾಧನೆಗಳನ್ನು ಸಾರಿದ ಮಹಾಮಹಿಳೆ

ಎಂದರೂ ತಪ್ಪಾಗಲಾರದು ಅನುಭವಮಂಟಪದಲ್ಲಿನ ಶಿವಶರಣರನ್ನು ಸಂದರ್ಶಿಸಿದ ಅಕ್ಕಮಹಾದೇವಿಯದು ಚೇತೋಹಾರಿ ಮನೋಭಾವ, ಇತರ ಶಿವಶರಣೆಯರಲ್ಲಿ ಸ್ವಲ್ಪ ಕಡಮೆ ಎನ್ನಬಹುದು. ಅಕ್ಕಮಹಾದೇವಿ ಸ್ತ್ರೀಗೆ ಸ್ವಾತಂತ್ರ್ಯವುಂಟೆಂದು ಸಾರುವಲ್ಲಿ ಸಫಲಳಾದಳು.

ಅಕ್ಕಮಹಾದೇವಿಯನ್ನು ಕುರಿತಂತೆ ದೊರೆತಿರುವ ಸಾಹಿತ್ಯ ಕೃತಿಗಳು ಯಾವುವೆಂದರೆ ಹರಿಹರ ಕವಿಯ "ಮಹಾದೇವಿಯಕ್ಕನ ರಗಳೆ". ಇದರಲ್ಲಿ ಹರಿಹರ ಮಹಾದೇವಿಯ ಜೀವನವನ್ನೂ, ಸಾಧನೆಯನ್ನೂ ಸೊಗಸಾಗಿ ವರ್ಣಿಸಿದ್ದಾನೆ. ಮಹಾದೇವಿಯಕ್ಕನ ರಗಳೆಯನ್ನು ಬಿಟ್ಟರೆ ಚೆನ್ನಬಸವಾಂಕನ "ಮಹಾದೇವಿಯಕ್ಕನ ಪುರಾಣ" ಹಾಗೂ ರಾಚಕವಿಯ "ಮಹಾದೇವಿಯಕ್ಕನ ಸಾಂಗತ್ಯ" ಗಳು ಸಹ ಅಕ್ಕಮಹಾದೇವಿಯ ಜೀವನ ಚರಿತ್ರೆಯನ್ನು ನಿರೂಪಿಸಲು ಸಹಾಯ ಮಾಡಿವೆ. ಅಲ್ಲದೆ ಇತರ ಶಿವಶರಣರ ವಚನಗಳಿಂದಲೂ ಸಹ ಅಕ್ಕಮಹಾದೇವಿಯ ಜೀವನದ ಕೆಲವೊಂದು ಅಂಶಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಆಂಡಾಳ್, ಮೀರಾಬಾಯಿಯರಂತೆ ಮಹಾಭಕ್ತೆಯಾದ ಅಕ್ಕಮಹಾದೇವಿಯ ಜೀವನದ ವಿವರಗಳನ್ನು ವಿವರಿಸುವುದಕ್ಕಿಂತಲೂ ಕನ್ನಡ ಸಾಹಿತ್ಯಕ್ಕೆ ಅಕ್ಕಮಹಾದೇವಿಯು ನೀಡಿದ ಕೊಡುಗೆಯನ್ನು ಇಲ್ಲಿ ನಿರೂಪಿಸಲಾಗಿದೆ.

ಅಕ್ಕಮಹಾದೇವಿಯು ಅಸಂಖ್ಯಾತವಾದ ವಚನಗಳನ್ನು ರಚಿಸಿದ್ದಾಳೆ. ಜೊತೆಗೆ ಯೋಗಾಂಗ ತ್ರಿವಿಧಿ ಎಂಬ ಅರವತ್ನಾಲ್ಕು ಪದ್ಯಗಳನ್ನೊಳಗೊಂಡ ಕೃತಿಯಲ್ಲಿ ತಾತ್ತ್ವಿಕ ವಿಷಯಗಳಿವೆ.

ಅಕ್ಕಮಹಾದೇವಿಯ ವಚನಗಳು ನಿತಾಂತ ಸುಂದರವಾಗಿವೆ. 'ಹಸಿವಾದರೆ ಊರೊಳಗೆ ಭಿಕ್ಷಾನ್ನಗಳುಂಟು, ತೃಷೆಯಾದಡೆ ಕೆರೆಹಳ್ಳಭಾವಿಗಳುಂಟು, ಶಯನಕ್ಕೆ ಹಾಳುದೇಗುಲಗಳುಂಟು ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನುಂಟು' ಎಂದು ಹೇಳುವ ಅಕ್ಕ ಚೆನ್ನಮಲ್ಲಿಕಾರ್ಜುನನಲ್ಲಿ ದಿವ್ಯವಾದ ಮೋಹವನ್ನುಳ್ಳವಳಾಗಿದ್ದಳು. ಚೆನ್ನಮಲ್ಲಿಕಾರ್ಜುನ ಎಂಬ ಅಂಕಿತದಿಂದ ಇವಳ ವಚನಗಳು ಮೂಡಿಬಂದಿವೆ. ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ ಕೋಪವ ತಾಳದೆ ಸಮಾಧಾನಿಯಾಗಿರಬೇಕು ಎನ್ನುವ ಅಕ್ಕ "ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ಚೆನ್ನಮಲ್ಲಿಕಾರ್ಜುನನನ್ನು ನೆನೆಯುತ್ತಾಳೆ". "ಎನ್ನ ಪಂಚೇಂದ್ರಿಯಂಗಳೂ ಕರ್ಪುರ ಉಂಡ ಉರಿಯಂತೆ ನಿಮ್ಮಲ್ಲಿ ಬೆರಸುಗೆ ಚೆನ್ನಮಲ್ಲಿಕಾರ್ಜುನಯ್ಯ" ಅಕ್ಕ ಚೆನ್ನ ಮಲ್ಲಿಕಾರ್ಜುನನಿಗಾಗಿ "ಕರಕೆಡ ನೋಡಿದಡೆ ಒಡಲನೂ ಪ್ರಾಣವನೂ ನಿಮಗೊಪ್ಪಿಸಿ ಶುದ್ಧಳಹೆನು" ಎಂಬ ನಿಲುವಿಗೂ ಬರುತ್ತಾಳೆ. ಗಿರಿಯಲ್ಲಲ್ಲದೇ ಹುಲ್ಲ ಮೊರಡಿಯಲ್ಲಾಡುವುದೇ ನವಿಲು ಅಂತೆಯೇ ಚೆನ್ನಮಲ್ಲಿಕಾರ್ಜುನನ ಚಿಂತೆಯಲ್ಲೇ ಇದ್ದಾಳೆ, ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲ ಸುತ್ತಿ ಸಾವ ತೆರನಂತೆ. ಆಗೆಗೆ ಅಳಸಂಕುಳ ಮಾಮರ ಬೆಳದಿಂಗಳು ಚೆನ್ನ ಮಲ್ಲಿಕಾರ್ಜುನನ ಇರವನ್ನು ತಿಳಿಸಬೇಕಂತೆ. ಹರನೇ ಗಂಡನಾಗಬೇಕೆಂದು ಅನಂತ ಕಾಲ ತಪಿಸಿದ್ದ ಮಹಾದೇವಿ, ಮಲ್ಲಿಕಾರ್ಜುನನಿಲ್ಲದಿದ್ದಾಗ 'ಬೆಳದಿಂಗಳೇ ಬಿಸಿಲಾಯಿತ್ತು ಕೆಳದಿ' ಎಂದು ಹಲುಬುತ್ತಾಳೆ ನೆಲದ ಮರೆಯ ನಿಧಾನದಂತೆ, ಶಿಲೆಯ ಮರೆಯ ಹೇಮದಂತೆ ಭಾವದ ಮರೆಯ ಬ್ರಹ್ಮವಾಗಿಪ್ಪ ಚೆನ್ನ ಮಲ್ಲಿಕಾರ್ಜುನನ ನಿಲವನ್ನರಿಯಲು ಮಾಯೆಯನ್ನು ಕಿತ್ತೊಗೆಯಬೇಕು ಎನ್ನ ಮಾಯದ ಮದವ ಮುರಿಯಯ್ಯ ಚೆನ್ನ ಮಲ್ಲಿಕಾರ್ಜುನ ನೀವೊಲಿದ ಮಾಯೆಯನು ಆರು ಗೆಲಲಾರರು ಎಂದೆಲ್ಲಾ ಮಾಯೆಯನ್ನು ಕುರಿತಂತೆ ಅನೇಕ ವಚನಗಳಿವೆ. ವನವೆಲ್ಲ ನೀವೆ ವನದೊಳಗಣ ದೇವತರುವೆಲ್ಲ ನೀವೆ ಎಂದು ಭಗವಂತನಿಗಾಗಿ ಹಂಬಲಿಸುವ ಮಹಾದೇವಿ ಕೊನೆಗೆ ಶ್ರೀ ಶೈಲದ ಕದಳೀವನದಲ್ಲಿ ದೈವ ಸಾಕ್ಷಾತ್ಕಾರ ಪಡೆಯುತ್ತಾಳೆ. ಅಕ್ಕಮಹಾದೇವಿಯ ವಚನಗಳ ವಿವರಣೆ ವಿಸ್ತೃತವಾದುದು "ಸ್ವಾನುಭವ ಜನಿತವೂ, ಅರ್ಥಪೂರ್ಣವೂ, ಭಾವಗರ್ಭಿತವೂ ಆದ ಅಕ್ಕಮಹಾದೇವಿಯ ವಚನಗಳು ಉತ್ಕೃಷ್ಟ ಸಾಹಿತ್ಯ ಮಾತ್ರವಲ್ಲ, ಉಜ್ಜೀವಕ ಸಾಹಿತ್ಯ, ದಿವ್ಯ ಸಾಹಿತ್ಯ" ಎಂಬ ವಿದ್ವಾಂಸರ ಹೇಳಿಕೆ, ಅಕ್ಕ ಮಹಾದೇವಿಯ ವಚನಗಳಿಗೆ ಚೆನ್ನಾಗಿ ಒಪ್ಪುತ್ತದೆ. ಪ್ರಾಚೀನ ಕವಯಿತ್ರಿಯರಲ್ಲಿ ಅಕ್ಕಮಹಾದೇವಿಯ ಸ್ಥಾನ ಗಣನೀಯವಾದುದಾಗಿದೆ.

ಸಿದ್ಧರಸ ದಂಡನಾಯಕರ ಕುಮಾರಿಯೂ, ಮಹಾತ್ಮರಾದ ಬಸವಣ್ಣನವರ ಪತ್ನಿಯೂ ಆದ ನೀಲಾಂಬಿಕೆಯೂ ನೂರಕ್ಕೂ ಹೆಚ್ಚಿನ ವಚನಗಳನ್ನು ರಚಿಸಿದ್ದಾಳೆ. ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಪಡೆದಿದ್ದ ನೀಲಾಂಬಿಕೆಗೆ ನೀಲವ್ವ, ನೀಲಮ್ಮ, ನೀಲಲೋಚನೆ ಎಂಬ ಹೆಸರುಗಳೂ ಇದ್ದವಂತೆ! ಬಸವಣ್ಣನವರಲ್ಲಿ ಅಪಾರವಾದ ಭಕ್ತಿಯನ್ನೂ. ವಿಶ್ವಾಸವನ್ನೂ ಇಟ್ಟಿದ್ದ ನೀಲಾಂಬಿಕೆಯು ತನ್ನ ವಚನಗಳಲ್ಲಿ ಬಸವಣ್ಣನವರ ವ್ಯಕ್ತಿತ್ತ್ವವನ್ನು ಸುಂದರವಾಗಿ ಬಿಂಬಿಸಿದ್ದಾಳೆ. ಸರಳವಾದ ಭಾಷಾಶೈಲಿಯಲ್ಲಿ ನೀಲಾಂಬಿಕೆಯ ವಚನಗಳು ರಚಿತಗೊಂಡಿವೆ.

ಹೃದಯದ ಮಧ್ಯದಲ್ಲೊಂದು
ಜ್ಯೋತಿಯ ಮನೆ ಹುಟ್ಟಿತ್ತು
ಆ ಜ್ಯೋತಿಯ ಮಧ್ಯದಲ್ಲಿ
ಸ್ಫಟಿಕದ ತನು ಬೆಳಗಿತ್ತು
ಆ ಬೆಳಗಿನ ತನುಮಧ್ಯದಲ್ಲಿ
ಮರುಜೇವಣಿಯ ಕುಡಿ
ಹೆಸರಿಲ್ಲದ ರೂಪಾಯಿತು ಬಸವಂಗೆ ಸಂಗಯ್ಯ

–ಇಂತಹ ಅನೇಕ ವಚನಗಳನ್ನು ರಚಿಸಿದ ನೀಲಾಂಬಿಕೆ ವಚನಕಾರ್ತಿಯರಲ್ಲಿ ಪ್ರಮುಖ ಸ್ಥಾನವನ್ನು ಪಡೆಯುತ್ತಾಳೆ.

ನೀಲಾಂಬಿಕೆಯಂತೆ ಬಸವಣ್ಣನವರ ಮತ್ತೊಬ್ಬ ಪತ್ನಿಯಾದ ಗಂಗಾಂಬಿಕೆಯೂ ಹಲವು ವಚನಗಳನ್ನು ರಚಿಸಿದ್ದಾಳೆ.

ಅಕ್ಕ ನಾಗಮ್ಮನ ವಿಷಯ "ಬಸವಪುರಾಣ" ಹಾಗೂ "ಸಿಂಗಿರಾಜ ಪುರಾಣ" ಗಳಲ್ಲಿ ಬರುತ್ತದೆ. ಶರಣನಾದ ಚೆನ್ನಬಸವಣ್ಣನ ಮಾತೆಯಾದ ಅಕ್ಕನಾಗಮ್ಮ ಬಸವಣ್ಣನವರ ಸಹೋದರಿಯಾಗಿದ್ದಳಂತೆ! ಮಹಾತ್ಮ ಬಸವಣ್ಣನವರ ತತ್ತ್ವಗಳನ್ನು ಅನುಸರಿಸುವಲ್ಲಿ ಅವರ ಸಹೋದರಿಯಾದ ಅಕ್ಕನಾಗಮ್ಮದೂ ಮಹತ್ತ್ವಪೂರ್ಣವಾದ ಪಾತ್ರವಾಗಿದ್ದಿತೆಂದು ಹೇಳಬಹುದು. ಅಕ್ಕನಾಗಮ್ಮನ ಜೀವನ ವೃತ್ತಾಂತಗಳ ಬಗೆಗೆ ದೊರೆತಿರುವ ವಿವರಗಳು ಸಂದೇಹಗಳಿಗೆ ಎಡೆಮಾಡಿ ಕೊಡುವಂತಹವಾಗಿವೆ. ಆಕೆ 'ಉಳವಿ' ಎಂಬಲ್ಲಿ ತನ್ನ ಅಂತ್ಯಕಾಲವನ್ನು ಕಳೆದಿರಬಹುದೆಂದೂ, ಕಲ್ಯಾಣದ ಕ್ರಾಂತಿಯಲ್ಲಿ ಭಾಗವಹಿಸಿ ಅದರಲ್ಲಿ ಗಮನಾರ್ಹವಾದ ಪಾತ್ರವನ್ನು ವಹಿಸಿರಬಹುದೆಂದೂ ಹೇಳಬಹುದಾಗಿದೆ.

"ಬಸವಣ್ಣ ಪ್ರಿಯ ಚೆನ್ನಸಂಗಯ್ಯ" ಎಂಬ ಅಂಕಿತದಲ್ಲಿರುವ ಅಕ್ಕನಾಗಮ್ಮನ ವಚನಗಳಲ್ಲಿ ಆಕೆ ಸಹೋದರನಾದ ಬಸವಣ್ಣನ ಮೇಲೆ ಅಪಾರ, ಪ್ರೀತಿ–ವಾತ್ಸಲ್ಯಗಳನ್ನು ಹೊಂದಿದ್ದ ವಿಚಾರವನ್ನು ಗುರುತಿಸಬಹುದಾಗಿದೆ. ಅಲ್ಲದೆ ಶರಣಸತಿ ಲಿಂಗಪತಿಯ ಭಾವನೆಯೂ ಸಹ ಅಕ್ಕನಾಗಮ್ಮನ ವಚನಗಳಲ್ಲಿ ಅಡಗಿಕೊಂಡಿದೆ ಎಂದು ಹೇಳುವುದು ಸರಿಯಾಗುತ್ತದೆ 'ಭಕ್ತಿಯ ತವನಿಧಿಯೇ ಬಸವಾ ನಿಮ್ಮನಗಲಿ ನಾನೆಂತು ಸೈರಿಸುವೆನು' ಎಂದು ಬಸವಣ್ಣನವರಿಗಾಗಿ ಅವರು ಐಕ್ಯರಾದ ಕೇಳಿದ ಬಳಿಕ ಅಕ್ಕನಾಗಮ್ಮ ವಿಪರೀತ ದುಃಖಿತಳಾಗಿದ್ದೂ ಉಂಟು.

ಅಕ್ಕನಾಗಮ್ಮನಂತೆಯೇ ವಚನ ಕಾರ್ತಿಯಾದ ಅಕ್ಕಮ್ಮನು ಬಸವಣ್ಣನವರನ್ನು ಭಕ್ತಿಭಾವದಿಂದ ಸ್ಮರಿಸಿದ್ದಾಳೆ ವಚನಕಾರ್ತಿಯರಲ್ಲಿ ಅಕ್ಕಮ್ಮ ಹೆಚ್ಚಿನ ವಚನಗಳನ್ನು ರಚಿಸಿದ ಕೀರ್ತಿಗೆ ಪಾತ್ರಳಾಗಿದ್ದಾಳೆ. ಅಕ್ಕಮನ ನಿಜವಾದ ಹೆಸರು ರೆಮ್ಮವ್ವೆ ಎಂಬ ಅಭಿಪ್ರಾಯವೂ ಇದೆ. ಅಕ್ಕಮ್ಮನ ವಚನಗಳಲ್ಲಿ ಡಾಂಭಿಕಾಚಾರವನ್ನು ನಡೆಸುವ

ಭಕ್ತನ ವಿಡಂಬನೆಯಿರುವುದನ್ನು ಕಾಣಬಹುದಾ ಗಿದೆ. ಅಕ್ಕಮ್ಮನ ವಚನಗಳಲ್ಲಿ ಹಲವು ವಚನ ಗಳು ಓದಲು ಸುಲಭವಾಗಿದ್ದರೂ ಗಾಢವಾದ ಅರ್ಥಾಭಿವ್ಯಕ್ತಿಯನ್ನುಂಟು ಮಾಡುವಲ್ಲಿ ಸಫಲ ವಾಗಿವೆ. "ರಾಮೇಶ್ವರ ಲಿಂಗ'' ನನ್ನು ತನ್ನ ವಚ ನಗಳಲ್ಲಿ ಅಕ್ಕಮ್ಮ ಅಂಕಿತನಾಮವನನ್ನಾಗಿ, ಮಾಡಿ ಕೊಂಡಿದ್ದಾಳೆ. ಅಕ್ಕಮ್ಮ ಕನ್ನಡ ಸಾಹಿ ತ್ಯದ ಇತಿಹಾಸದಲ್ಲಿ ಗಮನಾರ್ಹವಾದ ಸ್ಥಾನ ವನ್ನು ವಚನಗಳ ಸಂಖ್ಯೆಯ ದೃಷ್ಟಿಯಿಂಡ ಪಡೆದು ಕೊಂಡಿದ್ದಾಳೆ ಎಂದು ಹೇಳುವುದು ಉಚಿತವಾ ಗಿದೆ.

ಸೊಲ್ಲಾಪುರದಲ್ಲಿ ನೇಯ್ಗೆಯ ವೃತ್ತಿಯನ್ನು ಮಾಡುತ್ತಿದ್ದ ಅಮುಗಿದೇವಯ್ಯನ ಪತ್ನಿಯಾದ ಅಮುಗಿರಾಯಮ್ಮನ ವಚನಗಳ ಸಂಖ್ಯೆ ನೂರನ್ನೂ ದಾಟಿದೆ. ರಾಯಮ್ಮನ ವಚನಗಳು "ಅಮುಗೇಶ್ವರ ಲಿಂಗ'' ಎಂಬ ಅಂಕಿತನಾಮ ದಿಂದ ಕೊನೆಗೊಳ್ಳುತ್ತವೆ. ಈ ವಚನಗಳಲ್ಲಿ ಸತ್ಯ ನಿಷ್ಠುರತೆಯ ಚಿತ್ರಣ ವಚನಕಾರ್ತಿಯ ಆತ್ಮ ಜಿಜ್ಞಾಸೆಯ ವಿಚಾರ-ಇವುಗಳನ್ನು ನೋಡಬಹು ದಾಗಿದೆ. ರಾಯಮ್ಮ ತನ್ನ ಕಾಲದಲ್ಲಿ ಪ್ರಚಲಿತ ದಲ್ಲಿದ್ದ ಮೂಢಾಚಾರಗಳನ್ನೂ, ಡಾಂಭಿಕ ನಂಬಿಕೆ ಮೊದಲಾದವುಗಳನ್ನೂ ತನ್ನ ವಚನಗ ಳಲ್ಲಿ ಖಂಡಿಸಿರುವುದುಂಟು. ನೇಯ್ಗೆಯ ವೃತ್ತಿ ಯನ್ನು ನಿಷ್ಠೆಯಿಂದ ಮಾಡುತ್ತಿದ್ದ ಅಮುಗಿರಾ ಯಮ್ಮನ ವಚನಗಳು ಹೆಚ್ಚಿನ ವಿಚಾರಗಳನ್ನು ತಿಳಿಸುವಲ್ಲಿ ಗಮನಾರ್ಹವಾದ ಸ್ಥಾನವನ್ನು ಪಡೆದಿವೆ.

ಮೋಳಿಗೆಯ ಮಹಾದೇವಿ ಎಂಬ ವಚನ ಕಾರ್ತಿಯು "ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ'' ಎಂಬ ಅಂಕಿತದಿಂದ ವಚನ ಗಳನ್ನು ರಚಿಸಿದ್ದಾಳೆ. ಮೋಳಿಗೆಯ ಮಾರಯ್ಯನ ಪತ್ನಿಯಾದ ಈಕೆ ಕಾಶ್ಮೀರದರಾಣಿಯಾಗಿದ್ದಳೆಂದು ಪತಿಯ ಹಿಂದೆ ಕಲ್ಯಾಣಕ್ಕೆ ಬಂದು ದೀಕ್ಷೆಯನ್ನು ಕೈಗೊಂಡು ಅನೇಕ ವಚನಗಳನ್ನು ರಚಿಸಿದಳೆಂದು ತಿಳಿದು ಬರುತ್ತದೆ. ಅನುಭಾವದ ಸುಂದರ ಚಿತ್ರಣ ವಿರುವ ಮಹಾದೇವಿಯ ವಚನಗಳ ಸಂಖ್ಯೆ60ಕ್ಕೂ ಹೆಚ್ಚಿನದಾಗಿವೆ.

ಪ್ರಸಿದ್ಧ ವಚನಕಾರನೂ, ಶಿವಶರಣನೂ, ಆದ ಉರಿಲಿಂಗಪೆದ್ದಿಯ ಪತ್ನಿಯೇ ಕಾಳವ್ವ. ಈಕೆಯ ವಚನಗಳಲ್ಲಿ 'ಉರಿಲಿಂಗಪೆದ್ದಿಗಳರಸ' ಎಂಬ ಅಂಕಿತ ನಾಮವಿದೆ. ಭಕ್ತನಾದವ ಪರಿ ಹೇಗಿರ ಬೇಕೆಂಬ ವಿಚಾರ ಈಕೆಯ ವಚನಗಳಲ್ಲಿ ಮೂಡಿ ಬಂದಿದೆ.

"ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ" ಎಂದು ಸಾರಿದ ವಚನಕಾರ್ತಿಯೇ ಆಯ್ದಕ್ಕಿ ಲಕ್ಕಮ್ಮ. "ಮಾರಯ್ಯ ಪ್ರಿಯ ಅಮರೇ ಶ್ವರ ಲಿಂಗ" ಎಂಬ ಅಂಕಿತದಿಂದ ಅನೇಕ ವಚನ ಗಳನ್ನು ರಚಿಸಿರುವ ಆಯ್ದಕ್ಕಿ ಲಕ್ಕಮ್ಮನು ಇತರ ವಚನಕಾರ್ತಿಯರಿಗಿಂತಲೂ ತನ್ನ ಶೈಲಿಗಾಗಿ ಪ್ರಸಿದ್ಧಳಾಗಿದ್ದಾಳೆ.

ಹಡಪದ ಕಾಯಕ ಮಾಡುತ್ತಿದ್ದ ಅಪ್ಪಣ್ಣನ ಪತ್ನಿಯೆ ಹಡಪದ ಲಿಂಗಮ್ಮ. ಹಡಪದ ಲಿಂಗಮ್ಮ "ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ" ಎಂಬ ಅಂಕಿತ ದಿಂದ ನೂರಹತ್ತಕ್ಕೂ ಹೆಚ್ಚಿನ ವಚನಗಳನ್ನು ರಚಿಸಿದ್ದಾಳೆ. ಕಾಯಕ ನಿಷ್ಠೆ, ಅನುಭವದ ವಿಚಾರ ಅಧ್ಯಾತ್ಮಜ್ಞಾನದ ವಿವರಣೆ ಇವೆಲ್ಲವೂ ಲಿಂಗಮ್ಮನ ವಚನಗಳಲ್ಲಿವೆ.

ಗಾಳಿ ಬೀಸದ ಜಲದಂತೆ
ಮೋಡವಿಲ್ಲದ ಸೂರ್ಯನಂತೆ
ಬೆಳಗಿದ ದರ್ಪಣದಂತೆ ಮನ ನಿರ್ಮಳವಾದಲ್ಲದೆ
ಆ ಮಹಾಘನವ ಕಾಣ ಬಾರದು

-ಎಂಬಂತಹ ಅನೇಕ ವಚನಗಳ ರಚಯಿತ್ರಿಯಾಗಿ ಪ್ರಸಿದ್ಧಳಾಗಿದ್ದಾಳೆ ಹಡಪದ ಲಿಂಗಮ್ಮ.

ಇವರೇ ಅಲ್ಲದೆ ಇನ್ನೂ ಅದೆಷ್ಟೋ ಜನ ವಚನ ಕಾರ್ತಿಯರು ಈ ಕಾಲದಲ್ಲಾಗಿ ಹೋದರು. ಅವರ ಪರಿಚಯವನ್ನೂ ನೀಡುವುದು ಸ್ಥಳಾವ ಕಾಶದ ಪ್ರಶ್ನೆಯಿಂದಾಗಿ ತುಸು ಕಷ್ಟಸಾಧ್ಯ. ಆದರೂ ಈ ವಚನಕಾರ್ತಿಯರ ನಡುವೆ, ಒಂದು ಹೆಸರನ್ನು ಹೇಳಲೇ ಬೇಕು. ಅದು ಅದು ಅಜಗ ಣ್ಣನ ತಂಗಿ ಮುಕ್ತಾಯಿಯದು. ಮುಕ್ತಾಯಕ್ಕ ಮಾತನಾಡಿದ್ದೇ ಕಡಮೆ, ಆದರೆ ಆಕೆ ಆಡಿದ್ದು ಮಾತ್ರ ಅಲ್ಲಮ ಪ್ರಭುವಿನಲ್ಲಿ ಎಂಬುದನ್ನು ನೆನೆ ದಾಗ; ಆಕೆಯ ವಿದ್ವತ್ತಿನ ಘನತೆಯ ಅರಿವಾಗು ತ್ತದೆ. ಜಂಗಮ ಜ್ಞಾನ ಪರ್ವತ ಆತ. ಆತನನ್ನು ಪ್ರಶ್ನಿಸುವ, ಆತನಲ್ಲಿ ಅಧ್ಯಾತ್ಮ ವಿಷಯಚರ್ಚೆ ನಡೆಸುವ ಧೀಮಂತ ವ್ಯಕ್ತಿತ್ವ ಆಕೆಯದು. ರುಚಿ ಗಾಗಿ ಒಂದು ತುಣುಕು.

"........ನೆರೆಯರಿತು ಮರೆಯ ಬಲ್ಲಡೆ ಎನ್ನ ಅಜಗಣ್ಣನಂತೆ ಶಬ್ದಮುಗ್ಧ ವಾಗಿರಬೇಕಲ್ಲದೆ ಶಬ್ದ ಸಂದಣಿಯ ಮಾತು ಸಯವಲ್ಲ ನೋಡಾ ಪ್ರಭುವೆ''.

ಇಂತಹದ್ದು ಕನ್ನಡದ ವಚನಕಾರ್ತಿಯರ, ಕವಯಿತ್ರಿಯರ ಹಿರಿಮೆ. ಅವರು ನಡೆಸಿದ ಕೃಷಿಯ ಪ್ರಮಾಣ ಕಡಮೆಯಿರಬಹುದಾದರೂ ಆ ಕೃಷಿಯ ಗುಣ, ಪರಿಣಾಮಗಳು ಮಾತ್ರ ಹಿಂದಾದದ್ದೇ ಎಂದು ನಿಸ್ಸಂಕೋಚವಾಗಿ ಹೇಳಬಹುದು.

★

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆ ಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯ ವನ್ನು ತಿ. ತಿ. ದೇ. ಆರಂಭಿಸಿದೆ. ಈ ಯೋಜನೆಯ ವಿವರಗಳು ಈ ರೀತಿ ಇವೆ. ಯಾವ ಭಕ್ತರೇ ಆಗಲಿ ಹತ್ತು ಲಕ್ಷರೂಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ.ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.



ಶ್ರೀ ಮುದ್ದು ಕೃಷ್ಣ ಮನಾಯುಡು . ಜಿ.



ಶ್ರೀ ವೆಂಕಟೇಶ್ವರರಾವ್. ಎ.



ಶ್ರೀ ವಿ. ಕೆ. ಡಿ. ವಿ. ಎಸ್. ರಾಜು



ಶ್ರೀ ಬಾಲಮುರಳೀ ಕೃಷ್ಣ . ಎಂ.




ಶ್ರೀ ವೊತ್ತೂರಿ ಪಿ. ವೆಂಕಟೇಶ್ವರರಾವ್



ಶ್ರೀ ಪಿ. ವೆಂಕಟೇಶ್ವರುಲು



ಶ್ರೀ ಬಾಪು



ಶ್ರೀ ಪಿ. ನಾರಾಯಣಾಚಾರ್ಯ



ಶ್ರೀ ನರಸಿಂಗನಾಯಕ್. ಎಚ್.

ದಿನಾಂಕ 5 ರ ಸಂಜೆಯ ಸಭೆಯ ಒಂದು ದೃಶ್ಯ.





ಎಡದಿಂದ: ಸರ್ವಶ್ರೀ ಎಸ್. ಲಕ್ಷ್ಮೀನಾರಾಯಣ,
ಜಿ. ಮುದ್ದುಕೃಷ್ಣಮನಾಯುಡು, ನಾರಾಯಣರಾವ್,
ವಿ.ಕೆ.ಡಿ.ವಿ. ಎಸ್. ರಾಜು, ಪುಟ್ಟಪರ್ತಿ ನಾರಾಯಣಾಚಾರ್ಯ.

ರಾಮಜೋಗಿ ಮಂದು
ಕೊನರೇ ಓ ಜನುಲಾರ
ರಾಮಜೋಗಿ ಮಂದು ಕೊನಿ
ಪ್ರೇಮತೋ ಭುಜಿಯಿಂಚುಡನ್ನ
ಕಾಮಕ್ರೋಧ ಲೋಭ ಮೋಹ
ಘನಮೈನ ರೋಗಾಲಕು ಮಂದು

—ರಾಮದಾಸ

ಹದಿನೈದನೆಯ ಶತಕದಲ್ಲಿ ತಾಳ್ಳಪಾಕ ಅನ್ನಮಾಚಾರ್ಯರು ತಿರುಪತಿಯ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಕುರಿತು ಪರಮ ಭಕ್ತಿಯಿಂದ ಹಾಡಿದ ಕೀರ್ತನೆಗಳು ಮೂವತ್ತೆರಡುಸಾವಿರ. ಸ್ವಾಮಿಯ ಕೃಪಾಶೀರ್ವಾದಕ್ಕೆ ತಾವು ಪಾತ್ರರಾದದ್ದೇ ಅಲ್ಲದೆ, ಇತರರೂ ಆ ಮಾರ್ಗವನ್ನು ಅವಲಂಬಿಸಿ, ಭವಸಾಗರದಲ್ಲಿನ ಪಯಣವನ್ನು ಸುಲಭಗೊಳಿಸಿಕೊಳ್ಳಲಿ ಎಂಬುದೂ ಅವರ ಆಶಯವಾಗಿದ್ದಿತು. ಹಿಮಸಾಗರ ಮಧ್ಯದ ಭರತವರ್ಷದ ಮೂಲೆ ಮೂಲೆಗಳಲ್ಲೂ ಇಂತಹವರೇ ಅವತರಿಸಿ ಭಾರತದ ಏಕಾತ್ಮಕತೆಗೆ ಆಯಾ ಪ್ರಾಂತ್ಯಭಾಷೆಗಳಲ್ಲಿ ಕೃಷಿ ನಡೆಸಿದ್ದರ ಫಲವೇ ನಮಗೆ ಇಂದು ದೊರೆತಿರುವ ಭಕ್ತಿ ಸಾಹಿತ್ಯ – ಸಂಕೀರ್ತನ ಸಾಹಿತ್ಯ. ಇಂತಲ್ಲಿ ಭಾರತೀಯ ಏಕತೆಯಲ್ಲಿ ಭಕ್ತಿ ಪಂಥದ ಮಾರ್ಗ ದರ್ಶನ ಪಡೆಯುವುದೂ ಸಹಜವೇ ಆಗಿದೆ. ಎಂತಲೇ ತಿರುಮಲೆ ತಿರುಪತಿ ದೇವಸ್ಥಾನಗಳವರು ಈ ವರ್ಷದ ಅನ್ನಮಾಚಾರ್ಯ ಜಯಂತಿಯನ್ನು (577 ನೆಯದು) 'ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವ' ಎಂಬ ಹೆಸರಿನಲ್ಲಿ ಅಖಿಲಭಾರತ ಸ್ಥಾಯಿಯ ಸಂಗೀತೋತ್ಸವವಾಗಿ ಆಚರಿಸಿದರು. ಅನ್ನಮಾಚಾರ್ಯರಕೃತಿಗಳನ್ನು ರಾಷ್ಟ್ರೀಯ ಮಟ್ಟದಲ್ಲಿ ಪ್ರಚುರ ಪಡಿಸುವುದೂ ಈ ಸಂಗೀತೋತ್ಸವದ ಉದ್ದೇಶಗಳಲ್ಲಿ ಒಂದು ಎನ್ನಬಹುದು.

ಮೇ ಐದರಂದು ವೈಶಾಖಮಾಸದ ವಿಶಾಖಾ ನಕ್ಷತ್ರದ ಭಾನುವಾರ ಬೆಳಗ್ಗೆ ತಿ.ತಿ.ದೇ. ಆಡಳಿತಭವನದಿಂದ ಅನ್ನಮಾಚಾರ್ಯರ ಪ್ರತಿಮೆ, ಪುರಂದರದಾಸ, ತ್ಯಾಗರಾಜ, ಮೀರಾ ಬಾಯಿ, ಕ್ಷೇತ್ರಯ್ಯ, ತುಲಸೀದಾಸ, ಕಬೀರ ಮೊದಲಾದ ವಾಗ್ಗೇಯಕಾರರ ವರ್ಣಚಿತ್ರಗಳನ್ನು ಮೆರವಣಿಗೆಯಲ್ಲಿ ಶ್ರೀ ವೆಂಕಟೇಶ್ವರ ಸಂಗೀತ ನೃತ್ಯ ಕಲಾಶಾಲೆಗೆ ತೆಗೆದುಕೊಂಡು ಹೋಗಲಾಯಿತು. ಶ್ರೀನಿವಾಸ ಮಂಗಾಪುರದ ಶ್ರೀಕಲ್ಯಾಣ ವೆಂಕಟೇಶ್ವರ ಸ್ವಾಮಿಯ ಉತ್ಸವ ಮೂರ್ತಿಗಳು ಅಲ್ಲಿ ಮೆರವಣಿಗೆಯನ್ನು ಕೂಡಿಕೊಂಡನಂತರ ಮೆರವಣಿಗೆ ಅನ್ನಮಾಚಾರ್ಯ ಕಲಾಮಂದಿರಕ್ಕೆ ಬಂದು ತಲುಪಿತು. ಮೆರವಣಿಗೆಯಲ್ಲಿ ಸರ್ವಶ್ರೀ ನಾಮಗಿರಿಪೇಟೆ ಕೃಷ್ಣನ್, ಎಂ. ಟಿ. ಎಸ್. ಸೇತುರಾಮನ್, ಪೊನ್ನಸ್ವಾಮಿ, ಡಿ. ಪಟ್ಟಬ್ಬಾಯಿ, ಸಿ. ಕೆ. ಮಧುರೈ ಒಂಗೋಲು ರಂಗಯ್ಯ ಮೊದಲಾದ ವಿದ್ವಾಂಸರ ವೃಂದಗಳು, ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣರೂ, ತಿ ತಿ ದೇ. ಬೋರ್ಡ್‌ನ ಸದಸ್ಯ ಶ್ರೀ ಪಿ ವೆಂಕಟೇಶ್ವರುಲು, ರಕ್ಷಣಾಧಿಕಾರಿ ಶ್ರೀ ಕೆ ಕೃಷ್ಣಮೂರ್ತಿ, ಅನ್ನಮಾಚಾರ್ಯ ಪ್ರಾಜೆಕ್ಟನ ವಿಶೇಷ ಅಧಿಕಾರಿ ಶ್ರೀಕಾಮಿಶೆಟ್ಟಿ ಶ್ರೀನಿವಾಸಲು, ಸಂಗೀತ ಕಲಾಶಾಲೆಯ ಪ್ರಾಚಾರ್ಯರಾದ ಶ್ರೀ ಡಿ. ಪಶುಪತಿಯವರು ಮುಂತಾದ ಅಧಿಕಾರಿಗಳೂ ಭಾಗವಹಿಸಿದ್ದರು.

ಆಂಧ್ರಪ್ರದೇಶದ ದೇವಾದಾಯ ಇಲಾಖಾ ಮಂತ್ರಿ ಶ್ರೀ ಎಸ್. ಯತಿರಾಜಾರಾಯರು ಅನ್ನಮಾಚಾರ್ಯ ಕಲಾಮಂದಿರದಲ್ಲಿ ಅನ್ನಮಾಚಾರ್ಯರ ಪೂರ್ಣಪ್ರಮಾಣದ ವಿಗ್ರಹವನ್ನು ಅನಾವರಣಗೊಳಿಸಿ ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯರ ಸಂಗೀತೋತ್ಸವದ ನಾಂದಿ ಹೇಳಿದರು. ಅಂದು ಸಂಜೆ ತಿ. ತಿ. ದೇ. ಆಡಳಿತ ಭವನದ ಹಿಂದಿನ ಮೈದಾನದಲ್ಲಿ ಬಹಿರಂಗಸಭೆ ತಿ. ತಿ. ದೇ. ಬೋರ್ಡ್ ಅಧ್ಯಕ್ಷರು ಶ್ರೀ ವಿ.ಕೆ.ಡಿ.ವಿ. ಸತ್ಯನಾರಾಯಣರಾಜು ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀಎಸ್ ಲಕ್ಷ್ಮೀನಾರಾಯಣ ಸ್ವಾಗತ ಬಯಸುತ್ತಾ ಅನ್ನಮಾಚಾರ್ಯರದು ಸಂಗೀತಕ್ಕಾಗಿ ಅಥವಾ ಕವಿತ್ವ

ಸಂಗೀತ ಸಭೆಯಲ್ಲಿ ಶ್ರೀ ನೇದುನೂರಿ ಕೃಷ್ಣಮೂರ್ತಿ ಹಾಗೂ ವೃಂದ.



ಧಾರುಣಿಯೊಳು ಬಲುಭಾರ ಜೀವನನಾಗಿ
ಮೀರೆದಪ್ಪಿ ನಡೆದು ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗೆಲ್ಲ
ಧೀರವೇಣುಗೋಪಾಲ
ಪಾರುಗಾಣಿಸೊಸ್ವಾಮಿ
—ಶ್ರೀ ರಾಘವೇಂದ್ರಸ್ವಾಮಿಗಳು.



ಶ್ರೀ ಆರ್. ಫಣಿಶಾಯಿ

ಚಾಚುಕೋ ನೀ ಪಾದಾಲಕು
ತಗ ನೇ ಚೇಸಿನ ಪೂಜಲಿವಿ

—ಅನ್ನಮಾಚಾರ್ಯ.





ಶ್ರೀ ಮಹಾರಾಜಪುರಂ ಸಂತಾನಂ







ಬ್ರಹ್ಮ ಕಡಿಗಿನ ಪಾದಮು
ಬ್ರಹ್ಮಮು ತಾನೆ ನೀ ಪಾದಮು

—ಅನ್ನಮಾಚಾರ್ಯ.



ಶ್ರೀ ಪಿ. ಬಿ. ಶ್ರೀನಿವಾಸ್



ನಾವಲ್ಲ ನೀಕು ಪುಣ್ಯಮು
ನೀವಲ್ಲ ನಾಕು ಕೀರ್ತಿ

—ಅನ್ನಮಾಚಾರ್ಯ.



ಶ್ರೀ ಅಂಜದ್ ಅಲಿಖಾನ್

ಕ್ಕಾಗಿ ಉಂಟಾದ ಕೀರ್ತನೆಗಳಲ್ಲ ಎಂದು, ಅದು ಭಕ್ತಿಯಿಂದ ಉಂಟಾದದ್ದೆಂದೂ ತಿಳಿಸುತ್ತ, ಶ್ರೀ ವೆಂಕಟೇಶ್ವರ ಸಾಮ್ರಾಜ್ಯದಲ್ಲಿ ಭಾಷಾ, ವರ್ಣ, ಕುಲ, ವರ್ಗ, ಭೇದಗಳಿಲ್ಲವೆಂದೂ ಈರೀತಿಯಾದ ಸಂಗೀತ ಸಾಹಿತ್ಯ ಸಭೆ, ಉತ್ಸವಗಳಿಂದ ಭಾರತೀಯ ಏಕತೆ ದೃಢವಾಗುವುದೆಂಬ ಆಶಯದಿಂದ ಎಲ್ಲಾ ಪ್ರಾಂತ್ಯಗಳಿಂದ ವಿದ್ವಾಂಸರನ್ನು ಆಹ್ವಾನಿಸಲಾಗಿದೆಯೆಂದೂ, ಎಲ್ಲಾ ಪ್ರಾಂತಗಳ ಹಿರಿಯ ವಾಗ್ಗೇಯಕಾರರ ಆರಾಧನೆಯನ್ನು ನಡೆಸಲು ಈ ರೀತಿಯ ಸಂಗೀತೋತ್ಸವವನ್ನು ಏರ್ಪಡಿಸಲಾಗಿದೆಯೆಂದೂ ನುಡಿದರು.



ಎಡದಿಂದ ಸರ್ವಶ್ರೀ ಎಸ್. ಆರ್. ಜಾನಕೀರಾವ್,
ದಿವಾಕರ್ಲವೆಂಕಟಾವಧಾನಿ, ಕೆ. ವಿಶ್ವನಾಥ್.



ಹರಿಯವತಾರಮಿತಡು ಅನ್ನಮಯ್ಯ
ಅರಯ ಮಾಗುರುಡಿತಡು ಅನ್ನಮಯ್ಯ
ವೈಕುಂಠನಾಥುನಿವದ್ದ
ವಡಿ ಪಾಡುಚುನ್ನವಾಡು
ಆಕರಮೈ ತಾಳ್ಲಪಾಕ ಅನ್ನಮಯ್ಯ
—ತಾಳ್ಲಪಾಕ ಚಿನ್ನನ್ನ

ಜುಗಲ್‌ಬಂದಿಯಲ್ಲಿ ಶ್ರೀ ಉಸ್ತಾದ್ ದಿಲ್‌ಷಾದ್ ಖಾನ್,
ಹಾಗೂ ಶ್ರೀಮತಿ ಪರ್ವೀನ್ ಸುಲ್ತಾನಾ.





ಮಾಸ್ಟರ್. ಯು. ಶ್ರೀನಿವಾಸ್

ಆಂಧ್ರಪ್ರದೇಶದ ವಿದ್ಯಾಶಾಖಾಮಂತ್ರಿ ಶ್ರೀ ಜಿ. ಮುದ್ದುಕೃಷ್ಣಮನಾಯುಡು ಪ್ರಧಾನಅತಿಥಿಯಾಗಿ ಮಾತನಾಡುತ್ತ ಭಾರತೀಯ ಏಕತೆಯ ದೃಷ್ಟಿಯಿಂದ ಕೆಲಸ ಮಾಡುತ್ತಿರುವ ತಿ.ತಿ.ದೇ. ಗಳನ್ನು ಶ್ಲಾಘಿಸುತ್ತ ತಿ.ತಿ.ದೇ. ಮಾನವೋಪಯೋಗಿ ಯೋಜನೆಗಳತ್ತ ಹೆಚ್ಚು ಆಸಕ್ತಿ ಸೂಚಿಸಬೇಕೆಂದು ಕರೆ ನೀಡಿದರು.

ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಅವರು ವರದಿಯನ್ನು ಓದುತ್ತ ಪರಿಶೋಧನೆ, ಪ್ರಚಾರ ರಂಗಗಳಲ್ಲಿ ಪ್ರಾಜೆಕ್ಟ್ ಕೆಲಸ ಮಾಡುತ್ತಿದೆಯೆಂದು, ಪದಪ್ರಯೋಗ ಸೂಚಿ, ನಿಘಂಟು ಮೊದಲಾದುವನ್ನೂ ಕೀರ್ತನೆಗಳ ಕ್ಯಾಸೆಟ್‌ಗಳನ್ನು ಮಾಡಿಸಲು ತೀರ್ಮಾನಿಸಲಾಗಿದೆಯೆಂದರು.



ಎಡದಿಂದ ಪ್ರೊ॥ ರಾಮನಾಥನ್,
ಟಿ. ರಜನೀಕಾಂತರಾವ್, ಮಾರ್ತಾಂಡವರ್ಮ ಇಳಯರಾಜಾ.

ಶಾಂತಿಮು ಲೇಕ
ಸೌಖ್ಯಮು ಲೇದು
ಸಾರಸದಳನಯನ
ದಾಂತುನಿಕೈನ ವೇದಾಂತುನಿಕೈನ

—ತ್ಯಾಗರಾಜ.

ಶ್ರೀ ಚಿಟ್ಟಿಬಾಬು



ಆಂಧ್ರಪ್ರಭ ಪತ್ರಿಕೆಯ ಸಂಪಾದಕ ಶ್ರೀ ಪೊತ್ತೂರಿ ವೆಂಕಟೇಶ್ವರರಾವ್ ಅವರು ಮಾತನಾಡುತ್ತ ತಿ.ತಿ.ದೇ. ನಿರ್ವಹಿಸುತ್ತಿರುವ ಸಂಗೀತೋತ್ಸವವನ್ನು ಹೊಗಳುತ್ತ ಇದರ ಪೂರ್ತಿಪ್ರಭಾವ ತಿರುಪತಿಯಲ್ಲಿ ರೇಡಿಯೋ ಕೇಂದ್ರವಿದ್ದರೆ ಮಾತ್ರ ಸಾಧ್ಯವೆಂದೂ, ಆ ದಿಸೆಯಲ್ಲಿ ಕೆಲಸ ಆಗಬೇಕೆಂದೂ ಸೂಚಿಸಿದರು.

ಖ್ಯಾತ ಗಾಯಕ ಶ್ರೀ ಮಂಗಳಂಪಲ್ಲಿ ಬಾಲಿ ಮುರಳೀಕೃಷ್ಣ ಅವರು ಮಾತನಾಡುತ್ತ ಅನ್ನಮಾಚಾರ್ಯರ ಕಾಲದಲ್ಲಿದ್ದ ರಾಗ ಸ್ವರೂಪಗಳು ಇಂದು ಇಲ್ಲವೆಂದೂ, ಇವುಗಳನ್ನು ಗುರುತಿಸಲು ಪ್ರಯತ್ನಿಸುವುದು ಅಗತ್ಯವೆಂದೂ ನುಡಿದು,



ಪುರಂದರ ದಾಸಾಹ್ವಯುಂಡು
ಜನಿ ತಾಳ್ಳಪಾಕಶಾಸನುಂಡನ್ನ ಮಯ್ನ
ವೆನ್ನುನಿಗಾನಿ ಭಾವಿಂಚಿ ಕೀರ್ತಿಂಚಿ

ಸನ್ನುತಿಸೇಯ ನಾಚಾರ್ಯವರ್ಯುಂಡು
ನತನಿ ವಿಠ್ಠಲುನಿಗಾನನಯಂಬು ದಲಚಿ
ಪ್ರತಿಲೇನಿಗತುಲ ಸಂಭಾವಿಂಚಿನವುಡು

—ತಾಳ್ಲಪಾಕ ಚಿನ್ನನ್ನ.



ಶ್ರೀಮತಿ ವಾಣಿಜಯರಾಮ್

. ಮೃದಂಗ ವಿನ್ಯಾಸದಲ್ಲಿ ಶ್ರೀ ಎಲ್ಲಾ ವೆಂಕಟೇಶ್ವರರಾವ್.



ವೈಷ್ಣವ ಜನತೊ ತೇ ನ ಕಹಿಯೆ
ಜೇ ಪೀಡ ಪರಾಯಿ ಜಾಣರೇ
ಪರದುಃಖೆ ಉಪಕಾರ ಕರೆ ತೋಯೆ
ಮನ ಅಭಿಮಾನ ನ ಆಣರೇ

—ನರಸೀ ಮೆಹತಾ.



ಶ್ರೀ ಟಿ. ಟಿ. ವಾಸು

ಅನ್ನಮಯ್ಯನ ಬಗ್ಗೆ ಒಂದು ಕೀರ್ತನೆಯನ್ನೂ ನುಡಿದರು.

ಶ್ರೀ ವೆಟ್ಟೂರಿ ನಾರಾಯಣಾಚಾರ್ಯರು ಮಾತನಾಡುತ್ತ ಉತ್ತರದೇಶದಲ್ಲಿ ಅಯಾ ಪ್ರಾಂತಗಳಲ್ಲಿ ಅಲ್ಲಿನ ಕವಿ ಸಂತವಾಣಿ ಪ್ರಾಚುರ್ಯ ದಲ್ಲಿರುವನ್ನು, ಪ್ರಮಾಣದಲ್ಲಿ ದಕ್ಷಿಣದಲ್ಲಿ ಇಲ್ಲ ವೆಂದೂ ಪ್ರತಿಹಳ್ಳಿಗೂ ಅನ್ನಮಾಚಾರ್ಯರ ಕೀರ್ತನೆಗಳು ತಲುಪುವಂತಾಗಬೇಕೆಂದೂ ಹಾರೈಸಿದರು.

ಉತ್ಸವದ ಪ್ರಧಾನ ಪರ್ಯವೇಕ್ಷಕರಾದ ಶ್ರೀ ಕೆ. ಕೃಷ್ಣಮೂರ್ತಿಅವರು ವಂದನಾರ್ಪಣೆ ಮಾಡಿದರು.

ನಂತರ ಅನ್ನಮಾಚಾರ್ಯ ಪ್ರಾಜೆಕ್ಟ್ ವತಿಯಿಂದ ಶ್ರವ್ಯಸಂಗೀತರೂಪಕ 'ಹರಿಯವತಾರಂ' ಶ್ರೋತೃಗಳನ್ನು ರಂಜಿಸಿತು. ತಿ. ತಿ. ದೇ. ಆಸ್ಥಾನವಿದ್ವಾಂಸ ಶ್ರೀ ನೇದುನೂರಿ ಕೃಷ್ಣಮೂರ್ತಿ ಅವರ ಗಾನಸಭೆ ನಡೆದು,ಅವರನ್ನು ಸತ್ಕರಿಸಲಾಯಿತು.

ಮೇ ಆರರಂದು ಬೆಳಗ್ಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಸಂಗೀತ ವಿದ್ವಾಂಸ ಶ್ರೀ ಎಸ್. ಆರ್. ಜಾನಕೀರಾಮನ್ ಅವರ ಅಧ್ಯಕ್ಷತೆಯಲ್ಲಿ ಶ್ರೀ ರಾಳ್ಲಪಲ್ಲಿ ಫಣಿಶಾಯಿ ಅವರು 'ಅನ್ನಮಯ್ಯ ಸಂಗೀತ-ರಾಳ್ಲಪಲ್ಲಿಯವರ ದೃಷ್ಟಿ' ಎನ್ನುವ ವಿಷಯದಲ್ಲಿ ಉಪನ್ಯಾಸ ನೀಡಿ, ರಾಳ್ಲಪಲ್ಲಿ ಅನಂತ ಕೃಷ್ಣ ಶರ್ಮರು ಸ್ವರ ಸಂಯೋಜಿಸಿದ ಅನ್ನಮಯ್ಯ ಕೃತಿಗಳನ್ನು ಹಾಡಿದರು. ಆಂಧ್ರಪ್ರಭ ಸಂಪಾದಕರಾದ ಶ್ರೀ ಪಿ. ವೆಂಕಟೇಶ್ವರರಾವ್ ಅವರು ಫಣಿಶಾಯಿಯವರನ್ನೂ, ಜಾನಕೀರಾಮನ್ ಅವರನ್ನೂ ಸನ್ಮಾನಿಸಿದರು.

ಅಂದು ಸಂಜೆ ಬಯಲು ರಂಗ ಮಂಟಪದಲ್ಲಿ ಶ್ರೀ ಪಿ. ಬಿ. ಶ್ರೀನಿವಾಸ್ ಅವರ ಗಾಯನದಿಂದ ಉತ್ಸವ ಆರಂಭವಾಯಿತು. ತದನಂತರ ಶ್ರೀಮಹಾರಾಜಪುರ ಸಂತಾನಂ ಅವರ ವೃಂದದ ಗಾಯನ ಸಭೆ ರಂಜಿಸಿತು. ಶ್ರೀ ಅಂಜದ್ ಅಲಿಖಾನ್ ಅವರ ಸರೋದ್ ವಾದನಸಭೆ ಸಭಿಕರನ್ನು ಹೊಸ ಜಗತ್ತಿಗೆ ಒಯ್ದಿತೆನ್ನಬಹುದು. ಅಂದಿನ ಕಲಾಕಾರರನ್ನು ಎಲ್. ನರಸಿಂಗನಾಯಕ್ (ತಿ. ತಿ. ದೇ. ಬೋರ್ಡ್ ಸದಸ್ಯ) ಅವರು ಸನ್ಮಾನಿಸಿದರು.

ಮೇ ಏಳರಂದು ಬೆಳಗ್ಗೆ ಖ್ಯಾತ ಚಲನಚಿತ್ರ ದಿಗ್ದರ್ಶಕ ಕೆ. ವಿಶ್ವನಾಥ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಖಿಲಭಾರತ ಮಟ್ಟದಲ್ಲಿ ಅನ್ನಮಾಚಾರ್ಯ ಸಂಗೀತ ಸ್ಪರ್ಧೆಗಳನ್ನು ಏರ್ಪಡಿಸ



ಶ್ರೀಮತಿ ವಿದ್ಯಾಶಂಕರ್

ಬೇಕೆಂದೂ, ವಿಜೇತರಿಗೆ ಬಹುಮಾನ ನೀಡಬೇಕೆಂದೂ ಅವರು ಸೂಚಿಸಿದರು. ಆಚಾರ್ಯ ಶ್ರೀ ದಿವಾಕರ್ಲ ವೆಂಕಟಾವಧಾನಿ ಅವರು ಮಾತನಾಡುತ್ತ ಅನ್ನಮಾಚಾರ್ಯರ ಭಕ್ತಿ ಮಾರ್ಗದ ಆಚರಣೆ ಸುಲಭವೆಂದು, ಅನ್ನಮಯ್ಯನಿಂದ ಪ್ರಭಾವಿತರಾದ ಕವಿಗಳ ಬಗ್ಗೆ ವಿವರ ನೀಡಿದರು. ಶ್ರೀ ಎಸ್. ಆರ್. ಜಾನಕೀರಾಮನ್ ಅವರು ಮುತ್ತುಸ್ವಾಮಿ ದೀಕ್ಷಿತರ ಕೃತಿಗಳ ಸ್ವಾರಸ್ಯವನ್ನು ವಿವರಿಸಿ ಹಾಡಿ ತೋರಿಸಿದರು.

ಅಂದು ಸಂಜೆ ಬಯಲು ರಂಗ ಮಂಟಪದಲ್ಲಿ ನಡೆದ ಸಂಗೀತ ಸಭೆಗಳಲ್ಲಿ ಹೈದರಾಬಾದಿನ ರಾಮದಾಸಪ್ರಾಜೆಕ್ಟ್ ಕಲಾವಿದರು ಭದ್ರಾಚಲ ರಾಮದಾಸರ ಕೀರ್ತನೆಗಳನ್ನು ಹಾಡಿದರು. ಅಂತರರಾಜ್ಯಖ್ಯಾತಿಗಳಿಸಿದ ಮಾಸ್ಟರ್ ಯು. ಶ್ರೀನಿವಾಸ್‌ಅವರು ತಮ್ಮ ಮೆಂಡೋಲಿನ್ ವಾದನದಿಂದ ರಸಿಕರನ್ನು ರಂಜಿಸಿದರು. ತದನಂತರ ಶ್ರೀ ಉಸ್ತಾದ್‌ಖಾನ್ ಹಾಗೂ ಶ್ರೀಮತಿ ಪರ್ವೀನ್ ಸುಲ್ತಾನಾ ಅವರ ಜುಗಲ್‌ಬಂದಿ ಕಚೇರಿ ಮೃದು ಮಧುರ ಆಗಿತ್ತು. ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ಪಿ. ವೆಂಕಟೇಶ್ವರುಲು ಅವರು ವಿದ್ವಾಂಸರನ್ನು ಸತ್ಕರಿಸಿದರು.

ಮೇ ಎಂಟರಂದು ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಸ್ವಾತಿ ತಿರುನಾಳ್ ಮಹಾರಾಜರ ವಂಶದ ಶ್ರೀಮಾರ್ತಾಂಡವರ್ಮ ಇಳಯರಾಜಾ ಅವರ ಅಧ್ಯಕ್ಷತೆಯಲ್ಲಿ ಶ್ರೀ ಬಿ. ರಜನೀಕಾಂತ ರಾವ್ ಹಾಗೂ ಪ್ರೊ॥ ಎಸ್. ರಾಮನಾಥನ್ ಅವರು ಉಪನ್ಯಾಸ ನೀಡಿದರು. ಇಳೆಯರಾಜಾ ಅವರು ಸ್ವಾತಿ ತಿರುನಾಳರನ್ನು ಕುರಿತು, ರಜನೀಕಾಂತರಾಯರು ಕ್ಷೇತ್ರಯ್ಯ, ನಾರಾಯಣ ತೀರ್ಥರನ್ನು ಕುರಿತೂ, ರಾಮನಾಥನ್ ಅವರು ತ್ಯಾಗರಾಜರನ್ನು ಕುರಿತೂ ಮಾತನಾಡಿದರು. ತಿ. ತಿ. ದೇ. ಗಳ ರಕ್ಷಣಾಧಿಕಾರಿ ಶ್ರೀ ಕೆ. ಕೃಷ್ಣಮೂರ್ತಿ ಈ ವಿದ್ವಾಂಸರನ್ನು ಸತ್ಕರಿಸಿದರು.

ಅಂದು ಸಂಜೆ ಪ್ರೊ॥ ಎಸ್ ರಾಮನಾಥನ್ ಅವರು ತ್ಯಾಗರಾಜರ ಕೃತಿಗಳನ್ನು ಹಾಡುವುದರ ಮೂಲಕ ಸಂಗೀತ ಸಭೆಗಳು ಬಯಲುರಂಗ ಮಂಟಪದಲ್ಲಿ ಆರಂಭವಾದವು. ಖ್ಯಾತ ವೈಣಿಕ ಶ್ರೀ ಚಿಟ್ಟಿಬಾಬು ಅವರ ವೀಣಾವಾದನವೂ, ನಂತರ ಶ್ರೀ ಎಲ್ಲಾ ವೆಂಕಟೇಶ್ವರರಾವ್ ಅವರ ಮೃದಂಗ ತನಿಯೂ ಶ್ರೋತೃಗಳನ್ನು ಆನಂದದ ಅಲೆಗಳಲ್ಲಿ ತೇಲಾಡಿಸಿದವು. ಕೊನೆಗೆ ಶ್ರೀಮತಿ ವಾಣಿಜಯರಾಮ್ ಅವರ ಗಾನಾಭಾಷೆಯ

ಶ್ರೀಮತಿ ಶಕುಂತಲಾನರಸಿಂಹನ್



---

ಅರೆ ಮನ ಮೂರಖ ಜನಮ ಗವಾಯೌ
ಯಹ ಸಂಸಾರ ಸುವಾ
ಜೋ ಸುಂದರ ದೇಖಿ ಲುಭಾಯೌ
ಚಾಖನ ಲಾಗ್ಯೌ ರುಯೀ
ಉಡಿಗಯೀ ಕಛೂ ನಹಿ ಆಯೌ

—ಸೂರದಾಸ.

---

ನೃತ್ಯತ್ಕಂಠ ಮತ್ಕಂಠ ವಿಲೋಕನೀಯಂ
ಕೃಷ್ಣಂ ಮಣಿಸ್ತಂಭಗತಂ ಮೃಗಾಕ್ಷೀ
ನಿರೀಕ್ಷ್ಯ ಸಾಕ್ಷಾದಿವ ಕೃಷ್ಣಮಗ್ರೇ
ದ್ವಿಧಾ ವಿತೇನ ನವನೀತಮೇಕಂ

—ಲೀಲಾಶುಕ.

ಪುಸ್ತಕವನ್ನು ಬಿಡುಗಡೆ ಮಾಡುತ್ತ
ಡಾ॥ ಶಂಕರ ದಯಾಳಶರ್ಮ

ಕೀರ್ತನೆಗಳನ್ನು ಕೇಳಿದ ರಸಿಕರು ಸಂಗೀತೋತ್ಸವ ಸಾರ್ಥಕವೆಂಬ ಭಾವ ಹೊಂದಿದರು. ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ಪಿ. ಯಾದಗಿರಿ ಅವರು ವಿದ್ವಾಂಸರನ್ನು ಸತ್ಕರಿಸಿದರು.

ಕಡೆಯದಿನ–ಮೇ ಒಂಬತ್ತರಂದು – ಬೆಳಗ್ಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಮದ್ರಾಸ್ ಸಂಗೀತ ಅಕಾಡಮಿಯ ಅಧ್ಯಕ್ಷ ಶ್ರೀ ಟಿ. ಟಿ. ವಾಸು ಅವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಎಸ್. ವಿದ್ಯಾಶಂಕರ್ ಶಾಮಾಶಾಸ್ತ್ರಿಗಳ ಕೃತಿಗಳನ್ನು ಹಾಡಿ ಅವುಗಳ ವೈಶಿಷ್ಟ್ಯವನ್ನು ವಿವರಿಸಿದರು. ಅನಂತರ ಶ್ರೀಮತಿ ಶಕುಂತಲಾ ನರಸಿಂಹನ್ ಅವರು ಹಿಂದೂಸ್ಥಾನಿ ಕರ್ನಾಟಕಶೈಲಿಗಳ ತುಲನಾತ್ಮಕ ಪರಿಶೀಲನೆ ಮಾಡಿ 'ವಂದೇ ಜಗದ್ವಲ್ಲಭಂ' ಕೀರ್ತನೆಯನ್ನು ಎರಡೂ ಶೈಲಿಯಲ್ಲಿ ಹಾಡಿ ಮೆಚ್ಚುಗೆ ಪಡೆದರು. ತಿ. ತಿ. ದೇ. ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಶ್ರೀ ಟಿ. ಟಿ. ವಾಸು ಅವರನ್ನೂ ತಿ. ತಿ. ದೇ. ಆರ್ಥಿಕ ಸಲಹಾಧಿಕಾರಿ ಶ್ರೀ ಕೃಷ್ಣಸ್ವಾಮಿ ಅವರು ಉಪನ್ಯಾಸಕರನ್ನೂ ಸತ್ಕರಿಸಿದರು.

ಅಂದು ಸಂಜೆ ಬಯಲುರಂಗಮಂಟಪದಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ.ಕೆ.ಡಿ.ವಿ. ಸತ್ಯನಾರಾಯಣರಾಜು ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಭೆ ನಡೆಯಿತು. ಆಂಧ್ರಪ್ರದೇಶದ ರಾಜ್ಯಪಾಲ ಡಾ॥ ಶಂಕರದಯಾಳಶರ್ಮ ಅವರು ಮುಖ್ಯ ಅತಿಥಿಯಾಗಿ ಆಗಮಿಸಿ ಮಾತನಾಡುತ್ತ, ಅನ್ನಮಯ್ಯನ ಕೃತಿಗಳನ್ನು ದೇವನಾಗರಿಯಲ್ಲೂ ರೋಮನ್ ಲಿಪಿಯಲ್ಲೂ ಅಚ್ಚಿಸುವುದರಿಂದ ಅವುಗಳನ್ನು ವಿಶ್ವವ್ಯಾಪ್ತಗೊಳಿಸಬೇಕೆಂದೂ ಕರೆನೀಡುತ್ತ ಅನ್ನಮಯ್ಯನ 27 ಸಂಸ್ಕೃತ ಸಂಕೀರ್ತ



ಶ್ರೀ ಕೆ. ಜೆ. ಏಸುದಾಸ್

ನೆಗಳ 'ನಕ್ಷತ್ರಮಾಲಿಕೆ' (ಸಂಪಾದಕ ಶ್ರೀ ಎಸ್. ಪಿ. ವಿ. ನರಸಿಂಹಾಚಾರ್ಯುಲು) ಯನ್ನು ಬಿಡುಗಡೆ ಮಾಡಿದರು.

ರಾಜ್ಯಪಾಲರ ಭಾಷಣಕ್ಕೆ ಉತ್ತರಿಸುತ್ತ ಅವರುಗಳ ಸೂಚನೆಗಳನ್ನು ಕಾರ್ಯಗತಗೊಳಿಸಲು ಪ್ರಯತ್ನಿಸುವುದಾಗಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಲಕ್ಷ್ಮೀನಾರಾಯಣ ತಿಳಿಸಿದರು. ಬೋರ್ಡ್ಅಧ್ಯಕ್ಷರು ಸರ್ವರಿಗೂ ಕೃತಜ್ಞತೆಗಳನ್ನು ಸೂಚಿಸಿರಾಜ್ಯಪಾಲರನ್ನು ಶೇಷವಸ್ತ್ರದಿಂದ ಗೌರವಿಸಿದರು. ರಾಜ್ಯಪಾಲರು ತಿ.ತಿ.ದೇ. ಬೋರ್ಡ್ ಅಧ್ಯಕ್ಷರು, ಕಾರ್ಯನಿರ್ವಹಣಾಧಿಕಾರಿ, ಆರ್ಥಿಕ ಸಲಹಾಧಿಕಾರಿ ಕೃಷ್ಣಸ್ವಾಮಿ, ಬೋರ್ಡ್ ಸದಸ್ಯ ಶ್ರೀ ಯಾದಗಿರಿ, ರಕ್ಷಣಾಧಿಕಾರಿ ಶ್ರೀ ಕೆ. ಕೃಷ್ಣಮೂರ್ತಿ, ಸಂಗೀತ ಶಾಲೆಯ ಪ್ರಾಂಶುಪಾಲ ಶ್ರೀ ಡಿ. ಪಶುಪತಿ. ಚಿತ್ತೂರು ಜಿಲ್ಲೆ ಕಲೆಕ್ಟರ್ ಶ್ರೀ ಶ್ರೀಧರ್, ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಅವರುಗಳನ್ನು ಮೊಮೆಂಟೋಗಳಿಂದ ಸತ್ಕರಿಸಿದರು. ಶ್ರೀ ಕೃಷ್ಣಸ್ವಾಮಿ ಅವರು ಸಭೆಯನ್ನು ವಂದಿಸಿದರು.

ನಂತರ ನಡೆದ ಸಂಗೀತ ಸಭೆಯಲ್ಲಿ ಖ್ಯಾತ ಚಲನಚಿತ್ರ ಗಾಯಕ ಶ್ರೀ ಕೆ. ಜೆ. ಏಸುದಾಸ್ ಅವರು ಭಕ್ತಿಗೀತೆಗಳನ್ನು ಹಾಡಿ ಭಕ್ತಜನ ಮನರಂಜಿಸಿದರು. ಖ್ಯಾತ ಗಾಯಕ ಭೀಮಸೇನ ಜೋಷಿ ಅವರು ಅನ್ನಮಯ್ಯ ಪುರಂದರದಾಸರ ಕೀರ್ತನೆಗಳನ್ನು ಹಾಡಿ ಜನಮನ ಗೆದ್ದರು. ಕಲಾವಿದರ ಸಹಕಾರದಿಂದ ಐದುದಿನಗಳ ಸಂಗೀತೋತ್ಸವ ಯಶಸ್ವಿಯಾಯಿತು.

ಆವ ಕುಲವಾದರೇನು
ಭಾವದ ವಿಜ್ಞಾನ ತಿಳಿದವಗೆ ಮುಕ್ತಿ

ಅಸುಡೊಂಕು ಕಬ್ಬಿರಲು ಅದರೊಳಗಿದ್ದ
ರಸತಾನು ಡೊಂಕೇನೆಲೊ ಮರುಳ
ವಿಷಯ ಭಾವನೆ ಬಿಟ್ಟು ನೀ ಹೋಗಿ ಗುರುಗಳ
ಹಸನಾಗಿ ಕೇಳು ಕಾಣೋ ಮನುಜಾ

ನಾನಾ ವರ್ಣದ ಆಕಳ ಕ್ಷೀರದಲಿ
ನಾನಾ ವರ್ಣಗಳಿಹುವೇ ಮನುಜಾ
ಹೀನಭಾವನೆಗಳನಿಂಬಿಟ್ಟು ನೀಪೋಗಿ
ಜ್ಞಾನಿಗಳ ಕೇಳು ಕಾಣೋ ಮನುಜಾ

ಶರಧಿಯೊಳು ತೆರೆನೊರೆಗಳಾಪರಿಯಂತೆ
ಶರೀರವಲ್ಲದೆ ಬೇರಿಹುದೆ
ವರಪುರಂದರ ವಿಠಲನ ಸ್ಮರಿಸುತಿರಲು ನಿನಗೆ
ಸಿರಿಯಹುದು ಮುಕುತಿಯಹುದು ಮನುಜಾ

–ಪುರಂದರದಾಸ.

ಬ್ರಹ್ಮ ಮೊಕಟೆ ಪರ ಬ್ರಹ್ಮ ಮೊಕ್ಕಟೆ ಪರ
ಬ್ರಹ್ಮ ಮೊಕ್ಕಟೆ

ಕಂದುವಗು ಹೀನಾಧಿಕಮುಲಿಂದು ಲೇವು
ಅಂದರಿಕಿ ಶ್ರೀಹರೇ ಅಂತರಾತ್ಮ
ಇಂದುಲೋ ಜಂತುಕುಲ ಮಿಂತಾನೊಕಟೆ
ಅಂದರಿಕಿ ಶ್ರೀಹರೇ ಅಂತರಾತ್ಮ

ನಿಂಡಾರ ರಾಜು ನಿದ್ರಿಂಚು ನಿದ್ರಯುನೊಕಟೆ
ಅಂಡನೇ ಬಂಟು ನಿದ್ರ ಅದಿಯುನೊಕಟೆ
ಮೆಂಡೈನ ಬ್ರಾಹ್ಮಣುಡು
ಮೆಟ್ಟುಭೂಮಿಯೊಕಟೆ
ಚಂಡಾಲುಡುಂಡೇಟಿ ಸರಿಭೂಮಿಯೊಕಟೇ

ಕಡಗಿ ಯೇನುಗು ಮೀದ ಕಾಯುಯೆಂಡೊಕಟೆ
ಪುಡಮಿ ಶುನಕಮು ಮೀದ
ಪಾಲಯುನೆಂಡೊಕಟೆ
ಕಡು ಪುಣ್ಯುಲನು ಪಾಪ ಕರ್ಮುಲ ಸರಿಗಾವ
ಜಡಿಯು ಶ್ರೀವೆಂಕಟೇಶ್ವರು ನಾಮ ಮೊಕಟೇ

–ಅನ್ನಮಾಚಾರ್ಯ.



ಶ್ರೀ ಭೀಮಸೇನ್ ಜೋಷಿ

# ಸರಸ್ವತೀದೇವಿ

ವಿಶ್ವದ ಇತರ ಪ್ರದೇಶದ ಜನ ಇನ್ನೂ ಈ ಮಬ್ಬುಗತ್ತಲೆಯಲ್ಲೇ ಇದ್ದಾಗ ಭಾರತೀಯರು ಎಚ್ಚೆತ್ತು, ಪ್ರಕೃತಿಯನ್ನು ಆಳವಾಗಿ ಅಭ್ಯಾಸ ಮಾಡಿದರು. ಪ್ರಕೃತಿಯ ಎಲ್ಲ ಕ್ರಿಯೆಗಳಿಗೂ ಕಾರಣೀಭೂತವಾದ ಒಂದು ಅವ್ಯಕ್ತ ಶಕ್ತಿ ಇದೆ ಎಂದು ಅರಿತರು. ಈ ಶಕ್ತಿಯನ್ನು 'ದೇವತೆ' ಎಂದು ಕರೆದರು. ಅವುಗಳನ್ನು ಪ್ರಸನ್ನೀಕರಿಸಿಕೊಂಡರೆ, ಆ ಶಕ್ತಿಗಳು ತಮ್ಮನ್ನು ರಕ್ಷಿಸುತ್ತವೆ ಎಂದು ನಂಬಿದರು.

ಈ ದೈವೀಶಕ್ತಿಯನ್ನು ಅರಿತವರು ಋಷಿಗಳು ಎನ್ನಿಸಿಕೊಂಡರು. ಇವರು ಛಂದೋಮಯವಾದ ಋಕ್ಕುಗಳಲ್ಲಿ ಆ ದೇವತೆಗಳ ಸ್ತುತಿಗಳನ್ನು ರಚಿಸಿದರು. ಈ ಋಕ್ಕುಗಳ ರಚನೆಯೇ ಋಗ್ವೇದ.

ಬಾಲಗಂಗಾಧರತಿಲಕ್‌ರವರ ಪ್ರಕಾರ ಋಗ್ವೇದ, ಕ್ರಿ. ಪೂ ೫ ರಿಂದ ೬ ಸಾವಿರ ವರ್ಷಗಳಷ್ಟು ಹಳೆಯದು. ವಿಶ್ವದ ಪ್ರಾಚೀನ ಧಾರ್ಮಿಕ ಗ್ರಂಥಗಳಾದ ಬೈಬಲ್, ಖುರಾನ್, ಜೆಂದಾ ಅವೆಸ್ತಾ – ಮುಂತಾದುವು ಬಹಳ ಇತ್ತೀಚಿನವು.

ಋಗ್ವೇದದಲ್ಲಿ ಹೆಸರಿಸಿರುವ ನದಿಗಳಲ್ಲಿ ಸರಸ್ವತಿಯೂ ಒಂದು. ಈಗಿನ ಕುರುಕ್ಷೇತ್ರ ಪ್ರದೇಶದಲ್ಲಿ ಒಂದು ನದಿ ಹರಿಯುತ್ತಿದೆ. ಅದನ್ನು ಸರಸುತಿ ಎಂದು ಕರೆಯುತ್ತಾರೆ. ಇದೇ ಋಗ್ವೇದ ಯುಗದ ಸರಸ್ವತೀ ನದಿ ಎಂದು ಹೇಳುತ್ತಾರೆ.

ಋಗ್ವೇದ ಕಾಲದಲ್ಲಿ ಸರಸ್ವತೀ ನದಿಯ ಇಕ್ಕೆಲದಲ್ಲಿ ಅನೇಕ ಋಷಿಗಳು ವಾಸಿಸುತ್ತಿದ್ದರು.

ಋಗ್ವೇದದಲ್ಲಿ ಹೆಸರಿಸಿರುವ ದೇವತೆಗಳಲ್ಲಿ ಸರಸ್ವತಿಯೂ ಒಬ್ಬಳು. ಇವಳ ಸ್ತುತಿಯನ್ನು ಒಳಗೊಂಡ ಸೂಕ್ತವೇ "ಸರಸ್ವತೀ ಸೂಕ್ತ". ಇವುಗಳಲ್ಲಿ ಕೆಲವನ್ನು ವಸಿಷ್ಠರು, ಮತ್ತೆ ಕೆಲವನ್ನು ವಿಶ್ವಾಮಿತ್ರನ ಮಗನಾದ ಭಾರದ್ವಾಜನೂ ರಚಿಸಿದ್ದಾರೆ.

ಸರಸ್ವತೀ ಸೂಕ್ತದಲ್ಲಿ ಮೊದಲು ಸರಸ್ವತಿಯನ್ನು ಅವ್ಯಕ್ತ ಶಕ್ತಿಯಾಗಿ, ಅನಂತರ ನದೀರೂಪದ ಸಾಕಾರ ರೂಪದಲ್ಲಿ, ಅನ್ನಾದಿ ದೇವತೆಯಾಗಿ, ಧನ ಮತ್ತು ರಕ್ಷಣದೇವತೆಯಾಗಿ. ವಾಗ್‌ದೇವತೆಯಾಗಿ ಸ್ತುತಿಸಿರುವ ಸೂಕ್ತಗಳು ಕಂಡು ಬರುತ್ತವೆ.

ಸರಃ ಅಸ್ಯ ಅಸ್ತೀತಿ ಸರಸ್ವತೀ– ಎಂದೂ, ಸರಃ ತೇಜೋ ಯಸ್ಯ ವಿದ್ಯತೇ ಸಾ ಸರಸ್ವತೀ– ಎಂದೂ ಸರಸ್ವತಿ ಶಬ್ದಕ್ಕೆ ರೂಪ ನಿಷ್ಪತ್ತಿಯನ್ನು ಹೇಳಿದ್ದಾರೆ. ಸರಸ್ವತಿಯನ್ನು ನಿರಾಕಾರ ದೇವತೆಯಾಗಿ, ಅವ್ಯಕ್ತ ಶಕ್ತಿಯಾಗಿ ಭಾವಿಸಿ ಸ್ತುತಿಸಿರುವ ಸೂಕ್ತಗಳಲ್ಲಿ ಒಂದೆರಡನ್ನು ಇಲ್ಲಿ ನೋಡೋಣ:

ಪಾವಕಾ ನಃ ಸರಸ್ವತೀ  
ವಾಜೇಭಿರ್ವಾಜಿನೀವತೀ ।  
ಯಜ್ಞಂ ವಷ್ಟು ಧಿಯಾ ವಸುಃ ॥

ಇಯಂ ಶುಷ್ಮೇಭಿರ್ಬಿಸಖಾ  
ಇವಾರುಜತ್ಸಾನು ಗಿರೀಣಾಂ  
ತವಿಷೇಭಿ ರೂರ್ಮಿಭಿಃ ॥

ಪಾರಾವತಘ್ನೀಮವಸೇ ಸುವೃಕ್ತಿಭಿಃ ।  
ಸರಸ್ವತೀ ಮಾ ವಿವಾಸೇಮ ಧೀತಿಭಿಃ ।

ಪ್ರಯಾ ಮಹಿಮ್ನಾ ಮಹಿನಾ  
ಸುಚೇಕಿತೇ ದ್ಯುಮ್ನೇಭಿರನ್ಯಾ  
ಅಪಸಾಮಪಸ್ತಮಾ ।

ರಥ ಇವ ಬೃಹತೀ ವಿಭ್ವನೇ  
ಕೃತೋಪಸ್ತುತ್ಯಾ ಚಿಕಿತುಷಾ  
ಸರಸ್ವತೀ ॥

ಪ್ರಕ್ಷೋದಸಾ ಧಾಯಸಾ ಸಸ್ರ ಏಷಾ  
ಸರಸ್ವತಿ ಧರುಣ ಮಾಯಸೀ ಪೂಃ

ಸರಸ್ವತಿ ದೇವನಿದೋ  
ನಿಬರ್ಹಯ ಪ್ರಜಾಂ ವಿಶ್ವಸ್ಯ  
ಬಸಯಸ್ಯ ಮಾಯಿನಃ ।  
ಉತ ಕ್ಷಿತಿಭ್ಯೋsವನೀರವಿಂದೋ  
ವಿಷಮೇಭ್ಯೋ ಅಸ್ರವೋ ವಾಜಿನೀವತಿ ॥

ಈ ದೇವತೆಯನ್ನು ತೇಜೋರೂಪದಲ್ಲಿ ಕಾಣಲು, ಈ ನದಿಯೇ ಕಾರಣೀಭೂತಳು ಎನ್ನಿಸಿತು, ಋಷಿಗಳಿಗೆ. ನದಿಯ ಉಪಯುಕ್ತತೆಯನ್ನು ಅರಿತ ಅವರು ತೇಜೋರೂಪದ ವಿಶಿಷ್ಟಶಕ್ತಿಯ ರೂಪದಲ್ಲಿಯೇ ಅವಳನ್ನು ಸ್ತುತಿಸಿದ್ದಾರೆ. ಈ ಮಾತಿಗೆ ಪುಷ್ಟಿಕೊಡುವ ಒಂದೆರಡು ಸೂಕ್ತಗಳನ್ನು ಇಲ್ಲಿ ನೋಡೋಣ:–

ಮಹೋ ಅರ್ಣಸ್ಸರಸ್ವತೀ  
ಪ್ರಚೇತಯತಿ ಕೇತುನಾ ।  
ಧಿಯೋ ವಿಶ್ವಾ ವಿರಾಜತೀ ॥

ಪ್ರಬಾಬಧಾನಾ ರಥ್ಯೇವ ಯಾತಿ  
ವಿಶ್ವಾ ಅಪೋ ಮಹಿನಾ ಸಿಂಧುರನ್ಯಾಃ ।

ಅನ್ನ ಧನ ರಕ್ಷಣೆಗಳ ಅಧಿದೇವತೆ: ಸರಸ್ವತಿಯು ನದಿ ರೂಪದಲ್ಲಿ ಪ್ರವಹಿಸುತ್ತಾ ಅನ್ನವನ್ನೀಯುವ ಬೆಳೆಗಳನ್ನು ಬೆಳೆಯಲು ಸಹಾಯಕಳಾಗಿ, ಅನ್ನದೇವತೆಯೂ, ತನ್ಮೂಲಕ ಧನದೇವತೆಯೂ ಆಗಿದ್ದಾಳೆ. ಇವಳಲ್ಲಿ ತಮ್ಮನ್ನು ರಕ್ಷಿಸುವ ಶಕ್ತಿಯೂ ಇದೆ ಎಂದು ನಂಬಿ, ಸ್ತುತಿಸಿರುವ ಸೂಕ್ತಗಳೂ ಇವೆ.

ತೇ ವಿಶ್ವಾ ಸರಸ್ವತಿ  
ಶ್ರಿತಾಯೂಂಷಿ ದೇವ್ಯಾಂ ।  
ಶುನಹೋತ್ರೇಷು ಮತ್ಸ್ವ  
ಪ್ರಜಾಂ ದೇವಿ ದಿದಿಡ್ಡಿ ನಃ ॥

ಅಂಬಿತಮೇ ನದೀ ತಮೇ  
ದೇವಿ ತಮೇ ಸರಸ್ವತಿ ।  
ಅಪ್ರಶಸ್ತಾ ಇವ ಸ್ಮಸಿ  
ಪ್ರಶಸ್ತಿ ಮಂಬನ ಸ್ಕೃಧಿ ।

ಉಭೇ ಯತ್ತೇ ಮಹಿನಾ ಶುಭ್ರೇ  
ಅಂಧಸೀ ಅಧಿಕ್ಷಿಯಂತಿ ಪೂರವಃ ।

ಶ್ರೀ ಕೂಡಲಿ ಜಗನ್ನಾಥಶಾಸ್ತ್ರಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನೆ | ಪ್ರಾ 8–00 | ಪ್ರಾ 8–30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | " | 40–00 |
| 3. | ಪುಳಿಯೋಗರೆ | " | 50–00 |
| 4. | ಪೊಂಗಲು | " | 55–00 |
| 5. | ಸಕ್ಕರಪೊಂಗಲ್ | " | 65–00 |
| 6. | ಶಾಕರ ಭಾತ್ | " | 85–00 |
| 7. | ಕೇಸರೀ ಭಾತ್ | " | 90–00 |
| 8. | ಸೀರ | " | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಸಾ ನೋ ಬೋಧ್ಯ ವಿತ್ರೀ ಮರುತ್ಸಖಾ
ಚೋದರಾಧೋ ಮಘೋನಾಂ ॥

ಇಷ್ಟೇ ಅಲ್ಲದೆ ಸರಸ್ವತಿಯನ್ನು ಮನೋ ಚೇತನ ಶಕ್ತಿಯಾಗಿಯೂ, ವಾಗ್ದೇವತೆ ಯಾಗಿಯೂ ಋಗ್ವೇದ ಕಾಲದ ಋಷಿಗಳು ಕಂಡು ಅರಿತಿದ್ದಾರೆ. ಈ ದೃಷ್ಟಿಯಿಂದ ಅವಳನ್ನು ಪ್ರಸನ್ನಗೊಳಿಸಲು ಪ್ರಾರ್ಥನೆ ಯನ್ನು ಸಲ್ಲಿಸಿದ್ದಾರೆ. ಅಂತಹ ಒಂದೆರಡು ಸೂಕ್ತಗಳನ್ನು ಇಲ್ಲಿ ಗಮನಿಸಬಹುದು:

ಧಿಯೋ ವಿಶ್ವಾ ವಿರಾಜತಿ ॥

* * * *

ಉತ ನಃ ಪ್ರಿಯಾ ಪ್ರಿಯಾಸು
ಸಪ್ತಸ್ವಸಾ ಸುಜುಷ್ಟಾ ।
ಸರಸ್ವತೀ ಸ್ತೋಮ್ಯಾಭೂತ್ ॥

ಚೋದಯಿತ್ರೀ ಸೂನೃತಾನಾಂ
ಚೇತಂತೀ ಸುಮತಿನಾಂ ॥

ಬ್ರಹ್ಮ ಶಕ್ತಿಸ್ವರೂಪಿಣಿ: ಉಪನಿಷತ್ತುಗಳಲ್ಲಿಯೂ ಸರಸ್ವತಿಯನ್ನು ದಿವ್ಯ ಶಕ್ತಿ ಯನ್ನಾಗಿಯೇ ಸ್ತುತಿಸಿದ್ದಾರೆ. ಈ ಸ್ತುತಿ ಗಳನ್ನು "ಸರಸ್ವತೀ ರಹಸ್ಯೋಪನಿಷತ್ತು" ಎಂದು ಕರೆಯುತ್ತಾರೆ. ಇಲ್ಲಿ ಅವಳು ವೇದಾಂತ ತತ್ತ್ವಗಳ ಸ್ವರೂಪಳೂ, ಬ್ರಹ್ಮನ ಶಕ್ತಿ ಸ್ವರೂಪಳು. ಆಗಿರುವಂತೆ ಅನಾದಿಯೂ ಅನಂತಳೂ ಅವಿನಾಶಿನಿಯೂ ಆಗಿದ್ದಾಳೆ.

ಯಾ ವೇದಾಂತಾರ್ಥ ತತ್ತ್ವೈಕ
ಸ್ವರೂಪಾ ಪರಮಾರ್ಥತಃ ।
ನಾಮ ರೂಪಾತ್ಮನಾ ವ್ಯಕ್ತಾ
ಸಾ ಮಾಂ ಪಾತು ಸರಸ್ವತೀ ।

ಯಾ ವರ್ಣ ಪದವಾಕ್ಯಾರ್ಥಾ
ಸ್ವರೂಪೇಣೈವ ವರ್ತತೇ ।
ಅನಾದಿ ನಿಧನಾನಂತಾ
ಸಾ ಮಾಂ ಪಾತು ಸರಸ್ವತೀ ॥

ಸಗುಣ ಸ್ವರೂಪಿಣೀ ಶಾರದೇ ಶುಭ್ರಹಾರೇ: ಪುರಾಣಗಳ ಯುಗಕ್ಕೆ ಒಂದಾದ ಸರಸ್ವತಿ ಯನ್ನು ಸಗುಣ ರೂಪದಲ್ಲಿ ಸ್ತುತಿಸಿರುವುದು ಕಂಡುಬರುತ್ತದೆ. ಈ ಯುಗದ ಪ್ರಾರಂಭ; ಬ್ರಹ್ಮ ಮಾನವರನ್ನು ಸೃಷ್ಟಿಸಿದ. ಅವರಿಗೆ ಮಾತೇ ಬರುತ್ತಿರಲಿಲ್ಲ. ದೇವತೆಗಳನ್ನು ಸ್ತುತಿಸಿ ಆಹ್ವಾನಿಸುವವರೇ ಇಲ್ಲದಂತಾಯಿತು. ಆಗ ಬ್ರಹ್ಮ ಸರಸ್ವತಿಯನ್ನು ಪ್ರಸನ್ನೀಕರಿಸಿಕೊಂಡು, ದೇವತೆಗಳನ್ನು ತೃಪ್ತಿ ಪಡಿಸಿದ. ಬ್ರಹ್ಮ ಸ್ತುತಿಸಿದ ಬೀಜಾಕ್ಷರ ಭೂಯಿಷ್ಠವಾದ ಸ್ತುತಿಗಳಲ್ಲಿ ಎರಡು ಹೀಗಿವೆ:

ಐಂ ಐಂ ಐಂ ಇಷ್ಟಮಾತ್ರೇ ಕಮಲಭವ
ಮುಖಾಂಭೋಜ ಭೂತಿಸ್ವರೂಪೇ ।
ರೂಪಾರೂಪ ಪ್ರಕಾಶೇ ಸಕಲಗುಣ
ಮಯೇ
ನಿರ್ಗುಣೇ ನಿರ್ವಿಕಾರೇ ।
ನ ಸ್ಥೂಲೇ ನೈವ ಸೂಕ್ಷ್ಮೇಽಪ್ಯವಿದಿತ
ವಿಭವೇ ನಾಪಿ ವಿಜ್ಞಾನ ತತ್ತ್ವೇ ।
ವಿಶ್ವೇ ವಿಶ್ವಾಂಬರಾತ್ಮೇ ಸುರವರ
ನಮಿತೇ ನಿಷ್ಕಲೇ ನಿತ್ಯ ಶುದ್ಧೇ ॥೧॥

ಹ್ರೀಂ ಹ್ರೀಂ ಹ್ರೀಂ ಜಾಪತುಷ್ಟೇ
ಹಿಮರುಚಿ ಮಕುಟೇ ವಲ್ಲಕೀ
ವ್ಯಗ್ರಹಸ್ತೇ ।
ಮಾತರ್ಮಾತರ್ನಮಸ್ತೇ ದಹ ದಹ
ಜಡತಾಂ ದೇಹಿ ಬುದ್ಧಿಂ ಪ್ರಶಾಂತಿಮ್ ।
ವಿದ್ಯೇ ವೇದಾಂತವೇದ್ಯೇ ಪರಿಣತ
ಪಠಿತೇ ಮೋಕ್ಷದೇ ಮುಕ್ತಿಮಾರ್ಗೇ ।
ಮಾರ್ಗಾತೀತ ಸ್ವರೂಪೇ ಭವ
ಮನು ವರದಾ ಶಾರದೇ ಶುಭ್ರಹಾರೇ
॥೨॥

ಯಾಜ್ಞವಲ್ಕ್ಯ ಮುನಿಗಳೂ ಸಹ ಸರಸ್ವತಿಯನ್ನು ತೃಪ್ತಿಗೊಳಿಸಿ, ಅವಳ ಅನುಗ್ರಹವನ್ನು ಪಡೆದು ಶುಕ್ಲ ಯಜುರ್ವೇದವನ್ನು ರಚಿಸಿದ್ದಾರೆ. ಅವರು ಇವಳನ್ನು 'ಸಮಸ್ತ ವಿದ್ಯಾಧಿದೇವತೆ' ಎಂದೇ ಕರೆದಿದ್ದಾರೆ.

ಯಯಾ ವಿನಾ ಜಗತ್ ಸರ್ವಂ
ಶಶ್ವಜ್ಜೀವನ್ಮೃತಂ ಭವೇತ್ ।
ಜ್ಞಾನಾಧಿದೇವೀ ಯಾ ತಸ್ಯೈ
ವಾಣ್ಯೈ ನಮೋ ನಮಃ ॥
ಬ್ರಹ್ಮ ಸ್ವರೂಪಾ ಪರಮ
ಜ್ಯೋತಿ ರೂಪಾ ಸನಾತನೀ ।

(28ನೇ ಪುಟ ನೋಡಿ)

## ಕಿಶೋರಜಗತ್



# ಶ್ರೀ ಕೈವಾರ ನಾರಾಯಣಪ್ಪ ಸ್ತುತಿ

ಶರಣು ಶ್ರೀಕರ ಯೋಗಿ ಭಾಸ್ಕರ ಶುಭಕರ
ಕರುಣೆಯಿಂ ಕಾಪಾಡು ಯೋಗಿರಾಜ ।
ವರಕವಿಯೆ ಅಮರ ನಾರಾಯಣನ ಪ್ರಿಯಕರ
ಹರಸು ನಮ್ಮನು ನೀನೆ ದಿವ್ಯತೇಜ ॥ ॥ 1 ॥

ದೇವಾಂಶ ಸಂಭೂತ ತಿರಿಯೊಳಗೆ ಪ್ರಖ್ಯಾತ
ಕೈವಾರ ಪುರದಲ್ಲಿ ಜನಿಸಿ ಬಂದೆ ।
ದೇವಾಲಯವ ಗೈದೆ ಹೃದಯಮಂದಿರವನ್ನು
ಕೈವಾರ ಸಗ್ಗವಾಯಿತು ಓ ತಂದೆ ! ॥ ॥ 2 ॥

ಬಳೆಯ ಮಲ್ಲಾರ ಹೊತ್ತು ಹೆಗಲಲ್ಲಿ ಅನುದಿನ
ಇಳೆಯಲ್ಲಿ ಹರುಷದಿ ಸುತ್ತಿ ಮೆರೆದೆ ।
ಚಿಲಿಪಿಲಿ ಎನುತಾಡುವ ಪಕ್ಕಿಗಳ ತೆರದಿಂದೆ
ಕಲಿಯುಗದ ಕಗ್ಗವಂ ನೀ ಬರೆದೆ ॥ ॥ ॥ 3 ॥

ವೇದ ಸಾರವನು ಅಡಿಗಡಿಗೆ ನೀ ರಚಿಸಿ
ನಾದಯೋಗಿ ನೀನೆನಿಸಿದೆ ಗುರುವೆ ।
ಗಾದೆ ಮಾತುಗಳಾಡಿ ಮಹೋಪದೇಶಗಳಂ ನೀಡಿ
ದೇವ ಮೂರುತಿಯಾದೆ ಕಲ್ಪತರುವೆ ॥ ॥ 4 ॥

ಮಧ್ಯಾಗಡಿಯ ರಂಗನನು ಮನದಣಿಯೆ ನುತಿಸುತ್ತಾ
ರಾಗರಹಿತ ವಿರಾಗಿಯು ನೀನಾದೆ ।
ಭೋಗವಂ ನೀ ತ್ಯಜಿಸಿ ಜ್ಞಾನವನು ಅರ್ಜಿಸಿ
ಯೋಗಿಗಳ ಯೋಗಿವರ ನೀನಾದೆ ॥ ॥ 5 ॥

ಗರುಡ ದೇವನ ದರುಶನವ ಪಡೆದು ದಿನನಿತ್ಯ
ಕರುಣೆಯಿಂ ಬಳೆಯನ್ನು ಮಾರುತ್ತ ॥
ನರರಲ್ಲಿ ನಾರಾಯಣನ ರೂಪವನು ಕಾಣುತ್ತ
ಹರಿಹರಿ ಎನುತ ಕುಣಿದು ಹಾಡುತ್ತ ॥ ॥ 6 ॥

ಅಮರ ನಾರಾಯಣನ ಕರುಣೆಯಂ ನೀ ಪಡೆದು
ವಿಮಲ ಭಾವದಿಂ ನಾಡ ಸುತ್ತಿದೆ ।
ಕಮನೀಯ ವರಪುರುಷ ಕೈವಲ್ಯಮೂರುತಿ
ಅಮರ ನಾರಾಯಣನ ಬೀಜಬಿತ್ತಿದೆ ॥ ॥ 7 ॥

ಚಾರು ಚರಿತ್ರ ಅನುಪಮ ಗಾತ್ರ ಹರಿಪುತ್ರ ।
ಮಾರನನು ಗೆದ್ದು ವರ ಗುರುವಾದೆ ।
ಕಾರುಣ್ಯ ಮೂರುತಿಯೆ ಸುಜ್ಞಾನ ಚಂದ್ರಿಕೆಯೆ
ಧೀರಗಂಭೀರ ಕಲಿರಾಯನಾದೆ ॥ ॥ 8 ॥

ತಿರುಪತಿಯ ಪೊಕ್ಕು ಶ್ರೀನಿವಾಸನಂ ಕಂಡು
ಹರಿಹರಿ ಎನುತ ಹಾಡಿ ಹೊಗಳಿದೆ ।
ಗುರು ನೀನೆ ಕಲ್ಪತರು ನೀನೆ ಎಂದೆನುತಲಿ
ತಿರುಮಲೆಯ ಶೃಂಗದಲಿ ಹಾಡಿ ಕುಣಿದೆ ॥ ॥ 9 ॥

ಗರುಡ ಗೊಂಬೆಯ ಕುಹಕಿಗಳು ಕಟ್ಟೆ ವೃಕ್ಷದಿ
ಗುರು ಪಕ್ಕಿರಾಜನಿಗೆ ನಮಿಸೆಂದರು ।
ಶಿರವ ಬಾಗಲು ನೀನು ನಭಕೆ ಹಾರಿತು ಪಕ್ಕಿ
ಚರಣಕೆ ಕುಹಕಿಗಳು ಕವಿದು ಬಿದ್ದರು ॥ ॥ 10 ॥

ನಾದಪಂಥವನು ಹಿಡಿದ ವೇದಾಂತಿ ನೀನಾದೆ
ಗಾದೆ ಮಾತಿನ ಗಾರುಡಿಗ ನೀನು ।
ವೇದ ವಿಜ್ಞಾನ ಸುಧಾಮೃತವಂ ಬರೆಯುತಲಿ
ನಾದ ಮೂರುತಿಯನರ್ಚಿಸಿದೆ ನೀನು ॥ ॥ 11 ॥

ಭೋಗವಂ ತೊರೆದು ಯೋಗದಲಿ ಮುಳುಗಿದೆ
ರಾಗರಹಿತ ರಸ ಋಷಿ ಯಾಗಿ ।
ಯೋಗ ಮುದ್ರೆಯಲಿ ಕುಳಿತು ಏಕಚಕ್ರ ಪುರದಿ
ವಾಗೀಶನೆ ಜ್ಞಾನದಾ ನಿಧಿಯಾಗಿ ॥ ॥ 12 ॥

ಅಮರ ನಾರಾಯಣನ ಆಪ್ತಸಖ ನೀನಯ್ಯ
ವಿಮಲ ಕೋಮಲ ಗುರುವು ನೀನೆ ।
ಸುಮನ ಭಾವದಲಿ ನಾನೆದ್ದು ನುಡಿಸುವೆನು
ಕಮನೀಯ ಮೂರುತಿ ಪೊರೆಯೊ ನೀನೆ ॥ ॥ 13 ॥

ಪರದೇಶಿ ಸ್ವಾಮಿಗಳ ಉಪದೇಶವಂ ಪಡೆದು
ಗುರುಗಳಾ ಗುರುವು ನೀನಾದೆ ತಂದೆ ।

ಕರುಣಾಳು ಜ್ಯೋತಿ ಕೈವಲ್ಯಮೂರುತಿಯೇ
ಹರಸು ಎಮ್ಮನು ಒಲವಿನಿಂದ ॥ ॥ 14 ॥

ವಿರಚಿಸಿ ನೀನಿತ್ತೆ ವೇದಾಂತಸಾರಾವಳಿಯ
ಪರ ತತ್ತ್ವವು ಮನಕೆ ತಿಳಿಯುವಂತೆ ।
ನರರು ಧನ್ಯರು ಓದಿ ತಾರಕಾನಂದ ಶತಕವಂ
ಕರುಣಾಳು ಬಾಳುವರು ಅಮರರಂತೆ ॥ 15 ॥

ಬಲಿಜ ಕುಲ ಮಂದಾರ ಸಕಲಗುಣ ಶ್ರೀಕಾರ
ನಲಿವನು ಶ್ರೀಹರಿ ನಿನ್ನಯ ನುಡಿಗೆ ।
ಒಲಿದು ಹರಿಸೆನ್ನ ಕೈವಲ್ಯ ಮೂರುತಿಯೆ
ತಲೆಬಾಗಿ ಎರಗುವೆ ನಾನಿನ್ನ ಅಡಿಗೆ ॥ 16 ॥

ಏಕಚಕ್ರಪುರದದ್ರಿಯಲಿ ತಪಕೆ ನೀ ಕುಳಿತು
ನಾಕದ ಸಕಲ ಸೊಗವನು ನೀನುಂಡೆ ।
ಶ್ಲೋಕಗಳ ವಿರಚಿಸಿ ವೇದಾಂತ ತಿಳಿಸುತ್ತ
ಲೋಕದ ಅಣುರೇಣುವಿನಲಿ ಹರಿಯ ಕಂಡೆ । ॥ 17 ॥

ಗುರುವರನೆ ನಿನ್ನ ಏಕ ಚಿತ್ತದಲಿ ನೆನೆಯೆ
ಹಾರಿ ಪೋಪುವು ಜನುಮ ಜನುಮದಪಾಪಗಳು ।
ಪರಬ್ರಹ್ಮ ರೂಪನೆ ನಾದಪಂಥದ ಶ್ರೀಕರನೆ
ನೀಹರಸಿಲು ಹಿಂಗಿಪೋಪುವು ತಾಪಗಳು ॥ 18 ॥

ಬಳೆಯ ಮಾರುತ ಬಂದ ಭಾಗ್ಯನಿಧಿ ನೀನಾಗಿ
ಇಳೆಯ ನಾರಿಯರಲ್ಲಿ ಶ್ರೀಲಕುಮಿ ಕಂಡೆ ।
ನಳನಳಿಪ ಪರಿಪರಿಯ ಕುಸುಮಗಳಂ ಕಿತ್ತು
ನಳಿನನಾಭನ ಅಡಿಗಿರಿಸಿ ಸೊಗವನುಂಡೆ ॥ ॥ 19 ॥

ಸಂಸಾರವೆಂಬ ನಾಗಸರ್ಪವಂ ಪಿಡಿದು ನೀ
ನಿಸ್ಸಾರವೆಂದು ಬುಟ್ಟಿಯೊಳಗೆ ಕಟ್ಟಿಟ್ಟೆ ।
ಭಾಸುರ ಮೂರುತಿ ಅಮರನಾರಾಯಣನ ನಂಬಿ
ಲೇಸಾಗಿ ಸಗ್ಗದ ಹಾದಿಯನು ತೆರದಿಟ್ಟೆ ॥ ॥ 20 ॥

ಅಕಾರ ಉಕಾರ ಮಕಾರಂಗಳ ಪರಿಬಲ್ಲ ಓಂಕಾರಿ
ಏಕನಾದವ ಮೀಂಟುತ್ತ ಏಕಾಂಗಿಯಾದೆ ।
ಮಕರ ಕುಂಡಲನ ಮನದಣಿಯೆ ಸ್ತುತಿಸುತ್ತ
ನಾಕದ ಬಾಗಿಲನು ನೀ ತೆರೆಸಿದೆ ॥ ॥ 21 ॥

ದಾಸ ಪಂಥದ ದಾಸವರೇಣ್ಯನು ನೀನು
ಹಸನುಗೊಳಿಸಯ್ಯ ನನ್ನ ಬದುಕ ।
ಗಾಸಿಗೊಂಡಿಹೆ ನಾನು ಭವದ ಬೇಗೆಯಲಿ
ದಾಸನ ಬಾಳ್ಗೆ ನೀಡಯ್ಯ ಬೆಳಕ ॥ ॥ 22 ॥

ಕಲಿಯುಗದ ಕಾಮಧೇನುವು ನೀನಯ್ಯ
ಸುಲಲಿತ ಕೈವಾರ ಸಗ್ಗವಹುದು ।
ಭಕ್ತಿಯೆನ್ನುವ ಬಳೆಯ ತೊಡಿಸುವಾ ಬಳೆಗಾರ
ಎಲ್ಲೆಲ್ಲು ನಿನ್ನ ಮಹಿಮೆ ತುಂಬಿಹುದು ॥ ॥ 23 ॥

ಕೆಂದನಪಳ್ಳಿಯೊಳು ಹನುಮನನು ನುತಿಸುತ್ತ
ಆಂದದೊಳು ನೀ ಹಾಡಿ ತಣಿದೆ ।
ಮಂದಮತಿಗಳ ಅಜ್ಞಾನವಂ ತೊಡೆದು
ತಂದೆ ನೀನೆ ನಮ್ಮ ಪೊರೆದೆ ॥ ॥ 24 ॥

ಮಂಗಳವು ನಿನ್ನಡಿಗೆ ಯೋಗಿ ನಾರಾಯಣನೆ
ಕಂಗಳು ಧನ್ಯವಾದವು ನಿನ್ನ ನೋಡಿ ।
ಮಂಗಳವು ಕವಿತಾಕೃಷ್ಣನ ಮನದರಸನೆ
ಮಂಗಳಗೊಂಡೆ ನಾ ನಿನ್ನ ನಾಮಪಾಡಿ ॥ ॥ 25 ॥

—'ಕವಿತಾ ಕೃಷ್ಣ'

(26ನೇ ಪುಟದಿಂದ)

ಸರ್ವ ವಿದ್ಯಾಧಿ ದೇವೀ ಯಾ
ತಸ್ಯೈ ವಾಣ್ಯೈ ನಮೋ ನಮಃ ॥

ದುರ್ಗಾ ಸಪ್ತಶತಿ ಮುಂತಾದ ಗ್ರಂಥಗಳಲ್ಲಿ ಸತ್ತ್ವಗುಣ ಪ್ರಧಾನವಾದ ದೇವತೆಯನ್ನಾಗಿ ಸರಸ್ವತಿಯನ್ನು ಪರಿಗಣಿಸಲಾಗಿದೆ. ಬ್ರಹ್ಮ ವೈವರ್ತ ಪುರಾಣದಲ್ಲಿ ಜ್ಞಾನ ಬುದ್ಧಿಗಳನ್ನು ನೀಡುವ ದೇವತೆಯಾಗಿ ಹೇಳಿದೆ. ಸ್ಕಾಂದಪುರಾಣದಲ್ಲಿ ನಾಲ್ಕು ತೋಳುಗಳ ಸರಸ್ವತಿಯು ಕಲ್ಪನೆ ಇದೆ. ಒಂದು ಕೈಯಲ್ಲಿ ಕಮಲ, ಮತ್ತೊಂದರಲ್ಲಿ ಜಪಸರ, ಇನ್ನೊಂದರಲ್ಲಿ ಜಲತುಂಬಿದ ಕಮಂಡಲು, ಮತ್ತೊಂದು ಕೈಯಲ್ಲಿ ಪುಸ್ತಕ ಹಿಡಿದಿರುವಂತೆ ವರ್ಣಿಸಲಾಗಿದೆ. ಭಕ್ತರ ಜಿಹ್ವೆಯಲ್ಲಿ ವಾಗ್‌ರೂಪದಲ್ಲಿ, ನೇತ್ರಗಳಲ್ಲಿ ಜ್ಯೋತಿ ರೂಪದಲ್ಲಿ ನೆಲೆಸುತ್ತಾಳೆ ಎಂದು ಹೇಳಿದೆ. ಇವಳೇ ಗೌರಿಯಾಗಿ, ರೋಹಿಣಿಯಾಗಿ, ಲಕ್ಷ್ಮಿಯಾಗಿ, ಬ್ರಹ್ಮಾಣಿಯಾಗಿ ವರ್ಣಿತಳಾಗಿದ್ದಾಳೆ. ಸ್ಕಾಂದ ಪುರಾಣದ ಶ್ರೀ ಮಾತಾ ಮಾಹಾತ್ಮ್ಯ ವರ್ಣನೆಯಲ್ಲಿ ಸರಸ್ವತಿಯನ್ನು ಮತ್ತೊಂದು ರೂಪದಲ್ಲಿ ವರ್ಣಿಸಿದ್ದಾರೆ. ಇವಳು ಬ್ರಹ್ಮನ ಮಗಳು. ಜ್ಞಾನಿಗಳ ರಕ್ಷಣೆಗಾಗಿ, ಬ್ರಹ್ಮ, ಸರಸ್ವತಿಯನ್ನು ಧರ್ಮಾರಣ್ಯದಲ್ಲಿ ಸ್ಥಾಪಿಸುತ್ತಾನೆ. ಆವಳು ಸರ್ವಾಭರಣಗಳಿಂದ ಅಲಂಕೃತಳಾಗಿ, ಕಮಂಡಲ ಧರಿಸಿ, ಜಪಸರವನ್ನು ಹಿಡಿದು, ಕ್ಷೇತ್ರ ರಕ್ಷಕಳಾಗಿ ನಿಂತಿದ್ದಾಳೆ. ಇವಳಿಗೆ ಹತ್ತು ತೋಳುಗಳೂ ಐದು ಮುಖಗಳೂ ಇವೆ. ಇವಳು ಚಂದ್ರನನ್ನು ಧರಿಸಿದ್ದಾಳೆ. ಅನೇಕರು ಇವಳನ್ನು, ಕಾರ್ಯಾರಂಭದಲ್ಲಿ, ನಿರ್ವಿಘ್ನತೆಗಾಗಿಯೂ ಪೂಜಿಸಿದ್ದಾರೆ.

ಭವಿಷ್ಯ ಪುರಾಣದಲ್ಲಿ ಸರಸ್ವತಿಯ ಸಗುಣರೂಪವನ್ನು ಮತ್ತೊಂದು ರೀತಿಯಲ್ಲಿ ವರ್ಣಿಸಿದ್ದಾರೆ. ಜಪಮಾಲೆ, ಕಮಂಡಲು, ಪುಸ್ತಕ- ಇವುಗಳ ಜೊತೆಗೆ ವೀಣೆಯನ್ನು ಧರಿಸಿರುವಂತೆಯೂ ವರ್ಣಿಸಿದ್ದಾರೆ. ಇಲ್ಲಿ ಇವಳು ವಿದ್ಯಾಮಾತೆಯೂ ಹೌದು; ರಕ್ಷಣಾದೇವತೆಯೂ ಹೌದು.

ಹೀಗೆ ನಿರಾಕಾರ ಸ್ವರೂಪದ ತೇಜಃಶಕ್ತಿಯಾಗಿ ಆರಂಭವಾದ ಸರಸ್ವತಿಯ ಕಲ್ಪನೆ ಇಂದು ಚತುರ್ಭುಜೆಯಾದ, ವೀಣಾಪಾಣಿಯಾದ ವಿದ್ಯಾಭಿಮಾನಿ ದೇವತೆಯಾಗಿ ಕಾಣಿಸಿಕೊಂಡು ನಮ್ಮಿಂದ ಅರ್ಚಿಸಲ್ಪಡುತ್ತಿದ್ದಾಳೆ. ಈ ಸರಸ್ವತಿಯು ಎಲ್ಲರಿಗೂ ವಿದ್ಯಾಬುದ್ಧಿಗಳನ್ನು ಕೊಟ್ಟು ಕಾಪಾಡು ಎಂದು ಹಾರೈಸೋಣ.

ಸರಸ್ವತಿ ಮಹಾಭಾಗೇ
ವಿದ್ಯೇ ಕಮಲಲೋಚನೇ ।
ವಿಶ್ವರೂಪೇ ವಿಶಾಲಾಕ್ಷಿ
ವಿದ್ಯಾಂ ದೇಹಿ ನಮೋಸ್ತುತೇ ॥

# ಪ್ರದಕ್ಷಿಣೆಯ ರಹಸ್ಯ

"ಮರವ ಕಂಡಲ್ಲಿ ಸುತ್ತುವರಯ್ಯಾ" ಎಂದು ಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೇಳಿದ್ದಾರೆ. ಪ್ರತಿನಿತ್ಯ ಬೆಳಗಿನ ಸಮಯದಲ್ಲಿ ಎಷ್ಟೋ ಜನ ಮಹಿಳೆಯರು, ಮಹನೀಯರು ಯಾವುಯಾವುದೋ ಮಂತ್ರವನ್ನು ಹೇಳಿಕೊಳ್ಳುತ್ತ ಮರವನ್ನೋ, ದೇವಾಲಯವನ್ನೋ ಅಥವಾ ಕಲ್ಲನಾಗರಗಳನ್ನೋ ಸುತ್ತುವುದನ್ನು ಸಾಮಾನ್ಯವಾಗಿ ಎಲ್ಲರೂ ಕಂಡಿರುತ್ತಾರೆ. ಈ 'ಸುತ್ತುವದೇ' ಸಂಸ್ಕೃತದಲ್ಲಿ ಪ್ರದಕ್ಷಿಣೆಯಾಗಿದೆ 'ದಕ್ಷಿಣ'. ಎಂದರೆ ಬಲಭಾಗ. ಪೂಜ್ಯ ವಸ್ತುಗಳನ್ನು ಅಂದರೆ ಅಶ್ವತ್ಥವೃಕ್ಷ, ದೇವಸ್ಥಾನ, ದೇವ ಮೂರ್ತಿ-ಮುಂತಾದವುಗಳನ್ನು ಬಲಗೊಂಡು ಸುತ್ತುವುದಕ್ಕೆ ಪ್ರದಕ್ಷಿಣೆ ಎಂದು ಹೆಸರು. ನವವಿಧ ಭಕ್ತಿಗಳಲ್ಲಿ ಒಂದಾದ 'ವಂದನಾ' ಭಕ್ತಿಯಲ್ಲಿ ಇದೂ ಒಂದು ಪ್ರಭೇದವೆನ್ನಬಹುದು. ಅವರವರ ಉದ್ದೇಶ, ಆರಾಧ್ಯ ದೇವತೆ ಇವುಗಳಿಗೆ ತಕ್ಕಂತೆ ಭಕ್ತರು ಒಂದು ಸಲ, ಮೂರುಸಲ ಅಥವಾ ನೂರೆಂಟು ಸಲ ಇತ್ಯಾದಿಯಾಗಿ ಪ್ರದಕ್ಷಿಣೆ ಹಾಕುತ್ತಾರೆ. 'ಕರ್ಮಲೋಚನ' ವೆಂಬ ಗ್ರಂಥದಲ್ಲಿ ದೇವಿಗೆ ಒಂದು ಸಲ, ಸೂರ್ಯನಿಗೆ ಏಳು ಸಾರಿ, ವಿನಾಯಕನಿಗೆ ಮೂರುಸಾರಿ, ವಿಷ್ಣುವಿಗೆ ನಾಲ್ಕುಸಾರಿ, ಶಿವನಿಗೆ ಅರ್ಧಸಾರಿ, ಹೀಗೆ ಪ್ರದಕ್ಷಿಣೆ ಹಾಕಬೇಕೆಂದು ಹೇಳಲಾಗಿದೆ. ಒಬ್ಬೊಬ್ಬ ದೇವರಿಗೆ ಇಂತಿಷ್ಟು ಸಾರಿ ಪ್ರದಕ್ಷಿಣ ಹಾಕಬೇಕೆಂಬ ನಿಯಮವನ್ನು ಗಮನಿಸಿದರೆ ದೇವರಲ್ಲೂ ತಾರತಮ್ಯವಿದ್ದಂತೆ ತೋರುತ್ತದೆ! ಇನ್ನು ಈ ಪ್ರದಕ್ಷಿಣೆಯನ್ನು ಹೇಗೆ ಹಾಕಬೇಕೆಂಬುದರ ಬಗ್ಗೆ 'ಕಾಲಿಕಾಪುರಾಣದಲ್ಲಿ' ವರ್ಣನೆಯಿದೆ.

ಬಲಗೈಯನ್ನು ಇಳಿಬಿಟ್ಟುಕೊಂಡು, ತಲೆಯನ್ನು ವಿನಯದಿಂದ ಬಗ್ಗಿಸಿ ದೇವರು ತನ್ನ ಬಲಬಾಗದಲ್ಲಿ ಬರುವಂತೆ, ಚಿತ್ತ ಚಾಂಚಲ್ಯವಿಲ್ಲದೆ ಭಕ್ತಿಯಿಂದ ಸುತ್ತಬೇಕು – ಅದು ನಿಜವಾದ ಪ್ರದಕ್ಷಿಣೆ ಎನ್ನಲಾಗಿದೆ.

ಈ ಪ್ರದಕ್ಷಿಣೆಯ ರಹಸ್ಯವೇನು? ಅದರ ಹಿಂದಿರುವ ನೆಲೆಗಟ್ಟುಯಾವುದು? ಯಾವ ಉದ್ದೇಶಕ್ಕೆ ಈ ಪದ್ಧತಿ ಬಳಕೆಗೆ ಬಂದಿತು? ಎಂಬಿತ್ಯಾದಿ ಪ್ರಶ್ನೆಗಳೇಳುವುದು ಸಹಜ. ಇವಕ್ಕೆಲ್ಲ ಸೂಕ್ತ ಉತ್ತರಗಳನ್ನು ದೊರಕಿಸುವುದು ಕಷ್ಟವಾದರೂ ಅಸಾಧ್ಯವೇನಲ್ಲ. ಅನೇಕರು ಅನೇಕರೀತಿಯಿಂದ ಈ ಪ್ರದಕ್ಷಿಣೆಯ ಹಿಂದಿನ ತತ್ತ್ವವನ್ನು ವಿಶ್ಲೇಷಿಸಿದ್ದಾರೆ.

ಈ ಅನಂತವಿಶ್ವದ ಪ್ರತಿಯೊಂದು ಅಣುವು ತನ್ನ ಸುತ್ತಲು ತಿರುಗುತ್ತಲೇ ಇದೆ. ಭೂಮಿ ಮತ್ತು ಇತರ ಗ್ರಹಗಳು ಸೂರ್ಯನ ಸುತ್ತಲೂ, ಸೂರ್ಯ ಗ್ರಹ, ಉಪಗ್ರಹಗಳೊಂದಿಗೆ ಬೇರೊಂದು ಆಕಾಶಕಾಯವನ್ನು, ಅದು ಮತ್ತೊಂದನ್ನು, ಹೀಗೆ ಸಕಲವೂ ಸುತ್ತುತ್ತಲೇ ಇವೆ. ಈ ಸುತ್ತುವಿಕೆಗೆ ಪ್ರೇರಣೆ 'ಅನಂತಶಕ್ತಿ'ಯೊಂದರಿಂದ ದೊರೆತಿದ್ದು, ಅದನ್ನೇ ನಮ್ಮ ಪೂರ್ವಜರು 'ದೇವರು' ಎಂಬ ಹೆಸರಿನಿಂದ ಕರೆದರು. ಆ 'ದೇವರ' ಕೃಪೆಯನ್ನು ಪಡೆಯಲು ಆತನೇ ರಚಿಸಿದ ಸೃಷ್ಟಿ ನಿಯಮದಂತೆ ಆತನ 'ಮೂರ್ತಿ' ಯನ್ನು ಸುತ್ತು ಹಾಕುವ ಪದ್ಧತಿಯನ್ನು ಜಾರಿಗೆ ತಂದಿರಬಹುದೆಂದು ಕೆಲವರ ಅಭಿಪ್ರಾಯ.

ಋಗ್ವೇದ ಮತ್ತು ಉಪನಿಷತ್ತುಗಳಲ್ಲಿ ಒಂದು ಸುಂದರ ರೂಪಕವಿದೆ. ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳು ಕುಳಿತಿರುವುವು. ಒಂದು ಆ ವೃಕ್ಷದ ಮೇಲಿನ ಟೊಂಗೆಯ ತುದಿಯಲ್ಲಿ ಅತ್ಯಾನಂದವನ್ನು ಅನುಭವಿಸುತ್ತ, ತನ್ನನ್ನೇ ಮರೆತು ಕುಳಿತುಕೊಂಡಿದೆ. ಇನ್ನೊಂದು ಕೆಳಗಿನ ಟೊಂಗೆಯಲ್ಲಿ ಕುಳಿತಿದ್ದು ತುಂಬ ಚಂಚಲವಾಗಿದೆ. ಆ ವೃಕ್ಷದಲ್ಲಿ ಹಣ್ಣುಗಳು ಹೇರಳವಾಗಿದ್ದುದರಿಂದ ಅದು ಆ ಹಣ್ಣುಗಳನ್ನು ಸವಿಯಬೇಕೆಂಬ ಆಸೆಯಿಂದ ಒಂದು ಹಣ್ಣನ್ನು ಕಚ್ಚುತ್ತದೆ. ಅದು ತುಂಬ ರುಚಿಯಾಗಿರುತ್ತದೆ. ಆಗ ಸಂತೋಷಪಟ್ಟು ಮತ್ತೊಂದು ಹಣ್ಣನ್ನು ಕಚ್ಚುವುದು. ಆದರೆ ಅದು ಕಹಿಯಾಗಿದೆ! ಆಗ ಅದಕ್ಕೆ ಆ ಹಣ್ಣುಗಳ ಬಗ್ಗೆ ಉದಾಸೀನತೆ ಮೂಡುತ್ತದೆ. ಆಗ ಮರದ ತುದಿಯಲ್ಲಿ ಕುಳಿತ ಪಕ್ಷಿಯನ್ನು ನೋಡಿ ತಾನೂ ಅದರಂತಾಗಲು ಬಯಸಿ ಅದರ ಸಮೀಪಕ್ಕೆ ಹಾರುತ್ತಲಿದ್ದಾಗಲೇ ಮತ್ತೊಂದು ಹಣ್ಣು ಕಂಡು ಮೇಲೆ ಕುಳಿತ ಪಕ್ಷಿಯನ್ನು ಮರೆತು ಹಣ್ಣನ್ನು ಕಚ್ಚುವುದು. ಹೀಗೆಯೇ ಸಾಗುವುದು ಅದರ ಪಯಣ. ಕೊನೆಗೊಮ್ಮೆ ಈ ಸಿಹಿ – ಕಹಿಗಳಿಂದ ಬೇಸತ್ತು ಮೇಲೆ ಕುಳಿತ ಪಕ್ಷಿಯಂತಾಗಲು ಬಯಸಿ, ಅದರ ಹತ್ತಿರ ಬಂದು ಅದನ್ನು ಸುತ್ತತೊಡಗುವುದು. ಸುತ್ತುತ್ತಲೇ ಅದರಲ್ಲಿ ಆ ಪಕ್ಷಿಯೇ ತಾನು ಎಂಬ ಭಾವ ಮೂಡಿ ಅದೇ ಇದಾಗುವುದು. ಈ ರೂಪಕದಲ್ಲಿ ಮೇಲಿನ ಟೊಂಗೆಯ ಪಕ್ಷಿ ಶಿವ–ಮತ್ತು ಕೆಳಗಿನ ಟೊಂಗೆಯಲ್ಲಿ ಕುಳಿತ ಪಕ್ಷಿಯೆಂದರೆ ಜೀವ. ಸಂಸಾರದ ಸಿಹಿ ಕಹಿ ಫಲಗಳನ್ನು ತಿಂದು ಬೇಸತ್ತು ಆ ಶಿವನಲ್ಲಿ ಐಕ್ಯತೆ ಹೊಂದಲು ಜೀವ ಜಡಪಡಿಸುತ್ತದೆ. ಅದಕ್ಕಾಗಿ ಆ ಶಿವನನ್ನ ಸುತ್ತುವರೆಯುತ್ತದೆ. ಕೊನೆಗೆ ಅದೇ ತಾನೆಂಬ ಅರಿವು ಮೂಡಿ ಶಿವನಲ್ಲಿ ಐಕ್ಯವಾಗುತ್ತದೆ. ಜೀವನನ್ನು ಧರಿಸಿದ ದೇಹದ ಮೂಲಕ ಶಿವನನ್ನು ಕಲ್ಪಿಸಿಕೊಂಡ ಮೂರ್ತಿಯನ್ನು ಸುತ್ತುವುದರಿಂದ ಮುಕ್ತಿ, ಅಥವಾ ಶಿವನಲ್ಲಿ ಏಕಾತ್ಮತೆ ಸಾಧ್ಯ ಎಂಬ ಕಾರಣಕ್ಕಾಗಿ ಪ್ರದಕ್ಷಿಣೆಯ ಪದ್ಧತಿಯು ಪ್ರಾಚೀನಕಾಲದಿಂದಲೂ ಬಳಕೆಯಲ್ಲಿ ಬಂದಿತೆಂದು ಬಲ್ಲವರ ಕೆಲವರ ಅಭಿಪ್ರಾಯವಾಗಿದೆ.

ಪ್ರದಕ್ಷಿಣೆಯ ಅರ್ಥ ನಿರೂಪಿಸುವ ಪ್ರಸಂಗವೊಂದು ರಾಮಾಯಣದಲ್ಲಿದೆ. ರಾಮನು ರಾವಣನನ್ನು ಕೊಂದನಂತರ ವಿಭೀಷಣನನ್ನು ಲಂಕೆಗೆ ರಾಜನನ್ನಾಗಿ ಮಾಡಿ ತನ್ನ ಪತ್ನಿ ಸೀತೆಯಿಂದ ಒಡಗೂಡಿ ಬಂದಾಗ, ವಾನರ ಸೇನೆಗಲ್ಲ ತುಂಬ ಸಂತೋಷವಾಯಿತಂತೆ. ಆಗ ಅವರೆಲ್ಲ ರಾಮನ ಜಯ ಜಯಕಾರ ಮಾಡುತ್ತಾ ಆತನ ಸುತ್ತಲು ಸಂತೋಷದಿಂದ ಕುಣಿಯತೊಡಗಿದಂತೆ!

**ಶ್ರೀ ಗುರುನಾಥ ಇನಾಮದಾರ**

ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕವಸತಿಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ !

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ — ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

ಆ ಸಂತೋಷದ ಅತಿರೇಕದಲ್ಲಿ ಅವರೆಲ್ಲ ತಮ್ಮ 'ದೇಹಾಭಿಮಾನ' ವನ್ನು ಬಿಟ್ಟು ರಾಮನ 'ಜಯಕಾರ'ದ ಆನಂದದಲ್ಲಿ ತಲ್ಲೀನರಾಗಿ ಸುತ್ತುತ್ತಿದ್ದರಂತೆ. ಆದರಿಂದ ರಾಮನು ಸುಪ್ರಿತನಾದನಂತೆ. ಆದುದರಿಂದ ದೇವರನ್ನು ಸುಪ್ರೀತಗೊಳಿಸಲು ನಮ್ಮ ದೇಹಾಭಿಮಾನ ಮರೆತು ಅವನನ್ನು ಕೊಂಡಾಡುತ್ತ ಕುಣಿಯಬೇಕು. ಈ ಕುಣಿತವೇ ಪರಿಷ್ಕೃತಗೊಂಡು ಪ್ರದಕ್ಷಿಣೆಯಾಗಿರಬಹುದಲ್ಲವೇ. ಇಂದಿಗೂ ಪಾಂಡುರಂಗನ ಭಕ್ತರು (ಸಂತರು) ಹಾಡುತ್ತ ಕುಣಿಯುತ್ತ ದೇವರನ್ನು ಸುತ್ತುವುದನ್ನು ಕಾಣುತ್ತೇವೆ. ಇಲ್ಲಿ ದೇಹದ ಮೇಲಿನ ಅತಿಯಾದ ಅಭಿಮಾನ ತೊರೆದು 'ದೇವ' ಒಡೆಯನೆಂಬ ತಾನು ದಾಸನೆಂಬ ಭಾವವನ್ನು ಪ್ರಕಟಿಸುವುದೇ ಪ್ರದಕ್ಷಿಣೆ'ಯೆಂಬ ಅರ್ಥ ಸ್ಪಷ್ಟವಾಗುತ್ತದೆ.

ಗೀತೆಯ ೧೧ ಅಧ್ಯಾಯದಲ್ಲಿ "ನಮಃ ಪುರಸ್ತಾತ್ ಅಥ ಪೃಷ್ಠತಾತ್ | ನಮೋಸ್ತುತೇ ಸರ್ವತ ಏವ ಸರ್ವ" ಎಂದು ಹೇಳಲಾಗಿದೆ. ಅಂದರೆ ಸರ್ವತೋಮುಖಿಯಾದ ದೇವನನ್ನ ಮುಂದಿನಿಂದ, ಹಿಂದಿನಿಂದ ಮತ್ತು ಎಲ್ಲಕಡೆಯಿಂದಲೂ ನಮಿಸುತ್ತೇನೆ ಎಂದರ್ಥ. ಸರ್ವತೋಮುಖನಾದ ಭಗವಂತನ ಸರ್ವಮುಖಗಳಿಗೆ ನಮಿಸಬೇಕಾದರೆ, ಭಕ್ತನು ಆತನ ಸುತ್ತಲೂ ತಿರುಗಲೇಬೇಕಾಗುತ್ತದೆ. ಆದ್ದರಿಂದಲೆ ದೇವರ ಮೂರ್ತಿಗಳಿಗೆ ಪ್ರದಕ್ಷಿಣೆ ಹಾಕುವುದು ಎಂದು ಭಗವಂತನ ಸರ್ವತೋಮುಖತ್ವವನ್ನು ಪ್ರತಿಪಾದಿಸುವುದು ವಾದಿಸುತ್ತಾರೆ.

ಇನ್ನೂ ಸೂಕ್ಷ್ಮವಾಗಿ ವಿಚಾರಿಸಿದ ಕೆಲವರು "ಪ್ರದಕ್ಷಿಣೆ ಮೋಕ್ಷಮಾರ್ಗ"ದ ಸಂಕೇತ ಎಂದು ಹೇಳುತ್ತಾರೆ. ಶಾಸ್ತ್ರದಲ್ಲಿ ಜೀವನು ಆವಾಗಮನ ಅವಸ್ಥೆಯುಳ್ಳವನು ಎಂದು ಹೇಳಲಾಗಿದೆ. ಆವಾಗಮನ ಎರಡು ವಿಧವಾಗಿದೆ. ಒಂದು ಶುಕ್ಲ ಮಾರ್ಗದ್ದು ಇನ್ನೊಂದು ಕೃಷ್ಣ ಮಾರ್ಗದ್ದು. ಶುಕ್ಲ ಮಾರ್ಗದಿಂದ ಹೋದ ಜೀವ ಕ್ರಮವಾಗಿ ಮೇಲಕ್ಕೆ ಹೋಗುತ್ತ ಮೋಕ್ಷದ ಕಡೆಗೆ ಸಾಗುವುದು. ಕೃಷ್ಣ ಮಾರ್ಗದಿಂದ ಹೋದ ಜೀವ ಪುನರಾವರ್ತನೆಯುಳ್ಳದ್ದು. ಈ ಮಾರ್ಗಗಳನ್ನೆ ದಕ್ಷಿಣ ವಾಮ ಮಾರ್ಗಗಳೆಂದು ಹೆಸರಿಸಲಾಗಿದೆ. ಉಪಾಸಕನು ತನ್ನ ಉಪಾಸ್ಯ ದೇವತೆಯಲ್ಲಿ ಮೋಕ್ಷದ ಅಪೇಕ್ಷೆಯನ್ನು ವ್ಯಕ್ತ ಗೊಳಿಸುವದಕ್ಕಾಗಿ ದಕ್ಷಿಣಾವರ್ತ (ಶುಕ್ಲಮಾರ್ಗ)ವಾಗಿ ಸುತ್ತುವನು. ಬಹು ದುಸ್ತರವಾದ ಈ ಸಂಸಾರಕ್ಕೆ ಪುನಃ ಬರಬಾರದೆಂಬ ಅಪೇಕ್ಷೆ ಇರುವವರು ದೇವರನ್ನು ಬಲಗೊಂಡು ಸುತ್ತಿ, ಅಂದರೆ ಪ್ರದಕ್ಷಿಣೆಯನ್ನು ಹಾಕಿ, ಮೋಕ್ಷಪಡೆಯುತ್ತಾರೆ.

ಹಳ್ಳಿಯ 'ಗುರು 'ವೊಬ್ಬ ಸುಂದರವಾದ ಉದಾಹರಣೆಯ ಮೂಲಕ ಈ ಪ್ರದಕ್ಷಿಣೆಯ ರಹಸ್ಯವನ್ನು ವಿವರಿಸಿದ. ಈ ಸಂಸಾರ ಒಂದು ಬೀಸುವಕಲ್ಲು. ಅದರ ನಡುವಿನ ಗೂಟವೇ ವಿಶ್ವನಾಥ. ಮೇಲಿನಿಂದ ಕಾಳುಗಳನ್ನು ಹಾಕಿದಂತೆ, ಅವು ಗೂಟದ ಸುತ್ತಲೂ ಇರುತ್ತವೆ. ಆಗ ಅವು ಗಟ್ಟಿಯಾಗಿಯೇ ಇರುತ್ತವೆ. ಆದರೆ ಕ್ರಮೇಣ ಅವು ಗೂಟದಿಂದ ದೂರಸರಿದಂತೆ ಒಡೆದು ನುಚ್ಚಾಗಿ, ಹಿಟ್ಟಾಗಿ ಹೋಗುವವು ಹಾಗೆಯೇ ಮನುಷ್ಯರೂ ಕೂಡ. ಜಗಕ್ಕೆಲ್ಲ ಆಧಾರವಾಗಿರುವ ಆ ವಿಶ್ವನಾಥನನ್ನ ಮರೆತು ದೂರಸರಿದರೆ ನುಚ್ಚುನೂರಾಗಿ ನಾಶವಾಗುತ್ತಾರೆ. ಯಾರು ಅವನನ್ನೇ ನಂಬಿ ಆತನ ಸಮೀಪದಲ್ಲಿಯೇ ಇದ್ದು, ಅತನನ್ನೇ ಸುತ್ತುತ್ತ, ಸ್ಮರಿಸುತ್ತ ಇರುತ್ತರೆಯೋ ಅವರು ಶಾಶ್ವತವಾದ ಸುಖದಲ್ಲಿ ಇರುತ್ತಾರೆ. ಆದರೆ ಮನಸ್ಸು ಬಹು ಚಂಚಲ ಅದು ಸತತ ದೇವನಾಮಸ್ಮರಣೆಯಲ್ಲಿರಲು ಶಕ್ಯವಿಲ್ಲ, ಅದಕ್ಕಾಗಿ ಭಕ್ತನು ದೇವರ ಸುತ್ತು ಮೂರ್ತಿಗೆ ಪ್ರದಕ್ಷಿಣೆ ಹಾಕುತ್ತಾನೆ. ಆಗ ಆತನ ಮನಸ್ಸು ದೇವರನ್ನೇ ಸುತ್ತುತ್ತಿರುತ್ತದೆ. ಮನಸ್ಸಿನ ಈ ಸಾಧನೆಗಾಗಿ ಪ್ರದಕ್ಷಿಣೆಯ ಪದ್ಧತಿಯು ಬಳಕೆಯಲ್ಲಿ ಬಂದಿತು ಎಂದು ಆ 'ಗುರು' ವಿವರಿಸಿದ.

ಹೀಗೆ ಅನೇಕರು ಅನೇಕ ತೆರವಾಗಿ ಪ್ರದಕ್ಷಿಣೆಯ ಹಿಂದೆ ಅಡಗಿರುವ ತತ್ತ್ವವನ್ನು ವಿವರಿಸಿದರೂ ಕೂಡ, ಇವೆಲ್ಲ ಎಷ್ಟು ಸಮಂಜಸ ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ ಇವೆಲ್ಲವುಗಳಿಗೂ ವೈಜ್ಞಾನಿಕ ಅಡಿಪಾಯವಿದೆಯೇ? ಎಂದರೆ ಕ್ಷಣಹೊತ್ತು ಮೌನ ವಹಿಸಬೇಕಾಗುತ್ತದೆ. ಪ್ರದಕ್ಷಿಣೆಯ ರಹಸ್ಯವನ್ನು ಕುರಿತು ಶ್ರೀದತ್ತ ಅವಧೂತರು ಹೀಗೆ ಹೇಳುತ್ತಾರೆ – ಮನುಷ್ಯನ ಮಸ್ತಿಷ್ಕದಲ್ಲಿ ಮೂಡಿದ ಪ್ರತಿಯೊಂದು ವಿಚಾರ ಭಾವನೆಗಳನ್ನು ಅವನು ಅದನ್ನು ಅಭಿವ್ಯಕ್ತಗೊಳಿಸಿದ್ದ ಸ್ಥಾನದಲ್ಲಿ ವಲಯ ರೂಪವಾಗಿ ಇದ್ದೇ ಇರುತ್ತವೆ. ಈರೀತಿ ಅನೇಕ ಉನ್ನತ ವಿಚಾರ ಭಾವನೆಗಳನ್ನು ಒಂದು ನಿರ್ದಿಷ್ಟ ವಾದಸ್ಥಳದಲ್ಲಿ ಅಭಿವ್ಯಕ್ತಗೊಳಿಸುವುದರಿಂದ ಆಸ್ಥಳದಲ್ಲಿ ಅಂಥಪವಿತ್ರ ವಿಚಾರಗಳ ಸಾಂಪ್ರತಿ ಉಂಟಾಗುವುದು. ಹಾಗೆಯೇ ಅನೇಕ ಸಾಧು ಸತ್ಪುರುಷರು ತಮ್ಮ ಘನವಾದ ಅಧ್ಯಾತ್ಮಿಕ ಸಾಧನೆಯಿಂದ ಆಧ್ಯಾತ್ಮಿಕ ವಲಯ ನಿರ್ಮಿಸಿರುತ್ತಾರೆ ಇದೇ ದೇವಸ್ಥಾನಗಳ ತಾತ್ತ್ವಿಕಸ್ವರೂಪ. ಮಂದಿರವೆಂದರೆ ಕೇವಲ ಕಲ್ಲು ಮಣ್ಣಿನ ಕಟ್ಟಡವಲ್ಲ ಅಥವಾ ಸುಂದರ ವಿಗ್ರಹಗಳ ಸಂಗ್ರಹಾಲಯವೂ ಅಲ್ಲ. ದೀರ್ಘಕಾಲದವರೆಗೆ ಸಂಗ್ರಹಿತವಾದ ಅಧ್ಯಾತ್ಮವಲಯಗಳ ಘನೀಭೂತ ವಾತಾವರಣವೇ ಮಂದಿರ. ಇಂಥ ಮಂದಿರಗಳಲ್ಲಿ ಪ್ರದಕ್ಷಿಣೆ ಹಾಕುವುದು ಕೂಡ ಒಂದು ಸಾಧನೆಯೇ. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಅಧ್ಯಾತ್ಮಿಕ ವಲಯಗಳು ಇದ್ದೇ ಇದ್ದು, ಅವು ಆತನ ಸಂಸ್ಕಾರದಿಂದಾಗಿ ದುರ್ಬಲ ಅಥವಾ ಸಬಲವಾಗಿರುತ್ತವೆ. ಇವು ಕೂಡಿ ಒಂದು ನಿರ್ದಿಷ್ಟ ದಿಶೆಯಲ್ಲಿ ತಿರುಗುತ್ತಿರುತ್ತವೆ. ಇವುಗಳನ್ನು 'ವ್ಯಷ್ಟಿ ಆಧ್ಯಾತ್ಮಿಕ ವಲಯ' ಎಂದು ಕರೆಯಬಹುದು. ಸಾಮಾನ್ಯವಾಗಿ ಆಧ್ಯಾತ್ಮಿಕ ದೃಷ್ಟಿಯಲ್ಲಿ ಇವು ಬಹುಜನರಲ್ಲಿ ಸುಪ್ತವಾಗಿ ಅಥವಾ ದುರ್ಬಲವಾಗಿರುತ್ತವೆ. ಇಂಥವರು ಘನೀಭೂತ ಅಧ್ಯಾತ್ಮ ವಲಯವಿರುವ (ಇವುಗಳನ್ನು ಸಮಷ್ಟಿ ವಲಯಗಳೆಂದು ಕರೆಯಬಹುದು) ಸ್ಥಳಗಳಲ್ಲಿ ದಕ್ಷಿಣಾವರ್ತದಲ್ಲಿ ತಿರುಗುವುದರಿಂದ, ಚುಂಬಕದ ನಿಯಮದಂತೆ, ಇವೆರಡರ (ವ್ಯಷ್ಟಿ ಮತ್ತು ಸಮಷ್ಟಿ) ಮಧ್ಯೆ ಸಂಘರ್ಷಣವೇರ್ಪಟ್ಟು, ವ್ಯಕ್ತಿಯ ದುರ್ಬಲ ಅಧ್ಯಾತ್ಮಿಕ ವಲಯಗಳು ಉದ್ದೀಪನಗೊಳ್ಳುವುವು. ಆಗ ಅವರಲ್ಲಿ ಅಧ್ಯಾತ್ಮಿಕ ವಿಚಾರಗಳಿಗೆ ಅನುಕೂಲಕರವಾದ ಸಂಸ್ಕಾರಗಳ ಉತ್ಥಾಪನೆಯಾಗುವುದು. ಅದಕ್ಕಾಗಿ

ಭಕ್ತರು ದೇವಾಲಯದಲ್ಲಿ ಪ್ರದಕ್ಷಿಣೆಯನ್ನು ಹಾಕುವರು. ಆ ಮೂಲಕ ಅವರು ಆಧ್ಯಾತ್ಮಿಕ ಸಾಧನೆಯನ್ನು ಮಾಡುವರು.

ಆದರೆ ಈಶ್ವರ ದೇವಸ್ಥಾನದಲ್ಲಿ ಅರ್ಧ ಪ್ರದಕ್ಷಿಣೆಯು ನಿಯಮವಿದೆ. ಅಲ್ಲಿ ಹೇಗೆ ವ್ಯಷ್ಟಿ –ಸಮಷ್ಟಿಗಳ ಘರ್ಷಣೆಗಳುಂಟಾಗುತ್ತದೆಯೆಂಬ ಸಂಶಯ ಬರುತ್ತದೆ. ಇದಕ್ಕೆ ಶಾಸ್ತ್ರದ್ರಷ್ಟಾರರು ಹೇಳುವುದೇನೆಂದರೆ ಅಲ್ಲಿ ಸಮಷ್ಟಿ ಅಧ್ಯಾತ್ಮಿಕ ವಲಯಗಳು ದಕ್ಷಿಣಾವರ್ತ ಹಾಗೂ ವಾಮಾವರ್ತವಾಗಿ ಸುತ್ತುತ್ತಿರುವುದರಿಂದ ಅರ್ಧ ಪ್ರದಕ್ಷಿಣೆಯನ್ನು ಹಾಕಬೇಕಾಗುತ್ತದೆ. ಆದರಿಂದ ಒಮ್ಮೆ ದಕ್ಷಿಣಾವರ್ತವಾಗಿಯೂ ಹಿಂತಿರುಗುವಾಗ ವಾಮಾವರ್ತವಾಗಿಯೂ ಇರುವ ವಲಯಗಳಿಂದ ಘರ್ಷಣೆ ಉಂಟಾಗುತ್ತದೆ. ಅದರಿಂದಾಗಿ ಸುಪ್ತಾವಸ್ಥೆಯಲ್ಲಿರುವ ವ್ಯಷ್ಟಿ ಅಧಾತ್ಮಿಕವಲಯಗಳು ಚೇತರಿಸಿಕೊಳ್ಳುತ್ತವೆ.

ಇನ್ನು ಕೆಲವು ದೇವಸ್ಥಾನಗಳಲ್ಲಿ ಪ್ರದಕ್ಷಿಣೆ ಹಾಕಲು ಸ್ಥಳಾವಕಾಶವೇ ಇರುವುದಿಲ್ಲ. ಅಲ್ಲಿ ಉಪಾಸಕರು ತಾವೇ ದಕ್ಷಿಣಾವರ್ತವಾಗಿ ಸುತ್ತುವುದುಂಟು. ಇದರರ್ಥ ಯಾವ ಪರಮಾತ್ಮನ ಉಪಾಸನೆಯನ್ನು ನಾವು ಮಾಡುವೆವೋ ಅದೇ ಪರಮಾತ್ಮನು ಚೈತನ್ಯ ರೂಪದಲ್ಲಿ ನಮ್ಮ ಹೃದಯದಲ್ಲೂ ವಾಸ ಮಾಡುತ್ತಿರುವನೆಂಬ ಭಾವನೆಯಿಂದ ನಾವೇ ಸುತ್ತುವ ಅಥವಾ ಆತ್ಮ ಪ್ರದಕ್ಷಿಣೆಯ ಪದ್ಧತಿ ವಾಡಿಕೆಯಲ್ಲಿ ಬಂದಿದೆ. ಈ ರೀತಿಯ ಆತ್ಮ ಪ್ರದಕ್ಷಿಣೆಯು ನಮ್ಮ ಅಂತಸ್ಥ ಪರಮಾತ್ಮನ ಅಸ್ತಿತ್ವದ ಅನುಭವದ ದೃಢೀಕರಣ ಸಾಧನೆಯೂ ಹೌದು.

ಒಟ್ಟಿನಲ್ಲಿ ಪ್ರದಕ್ಷಿಣೆ ದೇವಸಾಕ್ಷಾತ್ಕಾರಕ್ಕೊಂದು ಸಾಧನೆಯೆಂಬ ಕಲ್ಪನೆಯನ್ನಿಟ್ಟುಕೊಂಡಾದರೂ ನಾವು ದೇವರನ್ನು ಸುತ್ತಿದರೆ, ಅದರಿಂದ ಪ್ರಯೋಜನ ದೊರತೀತೆ ವಿನಃ, ಅದರಲ್ಲಿ ನಂಬಿಕೆ ವಿಶ್ವಾಸಗಳಿಲ್ಲದೆ ಪ್ರದಕ್ಷಿಣೆ ಹಾಕಿದರೆ ಸರ್ವಜ್ಞ ಹೇಳಿದಂತೆ "ಎತ್ತು ತಾ ಗಾಣವನು ಹೊತ್ತು ತಿರುಗಿದಂತೆ" ವ್ಯರ್ಥವಾದುದೆಂದು ಹೇಳಬಹುದು.

---

# ಪುಸ್ತಕಗಳನ್ನು ಕುರಿತು....

ಪುಸ್ತಕಗಳ ಬಗ್ಗೆ ನನಗೆ ಎಲ್ಲಿಲ್ಲದ ಆದರ
ಒಂದು ಹೊಸ ಹೊತ್ತಗೆಯನ್ನು ಕೊಂಡಾಗ
ಅವಾಗ್ಗೋಚರ ಆತ್ಮಾನಂದ ತುಂದಿಲನು ನಾನಾಗುವೆ !
ಕಬ್ಬಿಣದ ಸಂಗೆಯ ಹೊಲಿಗೆ ಇದ್ದರೆ ಅದನ್ನು
ನಾಟಿದ ಮುಳ್ಳನ್ನು ಕಿತ್ತೊಗೆಯುವಂತೆ ಕಿತ್ತೆಸೆದು
ದಾರದ ಸುಂದರ ಹೊಲಿಗೆ ಹಾಕಿ ಮುದ್ದಾದ
ರಕ್ಷಾಕವಚ ತೊಡಿಸಿ
ಜೋಪಾನವಾಗಿ ಓದುವ ಆಸೆ ನನ್ನದು.

ರಕ್ಷಾಕವಚ ತೊಡಿಸುವಾಗ ಮಗನಿಗೆ ಹೊಸ ಅಂಗಿ ತೊಡಿಸಿದ
ಆ ಸಂತಸಕ್ಕೂ ಮಿಗಿಲು ಸಂತಸ ನನ್ನ ಪಾಲಿಗೆ
ವಿವಿಧ ಗ್ರಂಥಕರ್ತರ ಪುಸ್ತಕಗಳನ್ನು ಸಾಲಾಗಿರಿಸಿ, ನಾನು
ಅವುಗಳನ್ನು ಕಂಡಾಗ ಅವರೆಲ್ಲರು ನನ್ನ ಮನೆಯ
ಕೋಣೆಯಲ್ಲೇ ಸಭೆಸೇರಿದಂತೆ ನನಗನ್ನಿಸುತ್ತದೆ
ಆ ಧೀಮಂತರ ಸನ್ನಿಧಿ ನನ್ನ ಅಧ್ಯಯನ ಕೋಣೆಯೊಳಗಿದ್ದರೆ
ನಾನು ಸಭಾಮಧ್ಯದಲ್ಲಿ ಪಂಡಿತ ಮಂಡಲಿಯಲ್ಲಿ
ವಿಹರಿಸುತ್ತಿರುವ ಅಮಿತಾನಂದ ನನಗೆ.

ಪುಸ್ತಕ ತೆರೆದು ಓದುತ್ತ ಕುಳಿತಾಗ, ಸಂತಸದೊಡನೆ
ನನ್ನ ಅಜ್ಞಾನದ ಅರಿವಾಗಿ, ಆದರ ಕೊರತೆಯಿಂದ ಮರುಗಿದ್ದೇನೆ
ಹಿತವಾದ ಹಿತವಾದಗಳಿಂದ ಸೂಕ್ತಿಮುಕ್ತಾಫಲಗಳಿಂದ
ಶ್ರೀಮಂತನು ನಾನಾಗಿದ್ದೇನೆ, ದುಃಖಗಳನ್ನು ಮರೆತಿದ್ದೇನೆ
'ಮಾಘೇ ಮೇಘೇ ಗತಂ ವಯಃ' ಎಂದ ಮಲ್ಲಿನಾಥನಿಗೆ
ಶಿರಬಾಗಿದ್ದೇನೆ, "ತಸ್ಯ ಮೇ ಸರ್ವ ಶಿಷ್ಯಸ್ಯ
ನೋಪದೇಶದರಿದ್ರತಾ"
ಎಂದ ಕಲ್ಲಟನನ್ನು ಅಭಿವಂದಿಸಿದ್ದೇನೆ

ಜ್ಞಾನ ಸಮುದ್ರವನ್ನು ನೋಡಿಯೇ ವಿಸ್ಮಿತನಾಗಿ
ನಾನೆಂತಹ ಕಿರು ಬಿಂದಿಗೆ ಎಂದಂದುಕೊಂಡಿದ್ದೇನೆ.

ನನಗೆ ಮುದ್ದಿಸಿ ಬುದ್ಧಿ ಹೇಳುವ ಪುಸ್ತಕಗಳು ನನ್ನಲ್ಲಿವೆ
ನನ್ನ ಲೋಪದೋಷಗಳಿಗೆ ಕನ್ನಡಿಯಾಗಬಲ್ಲವು
ಕೊರತೆಯನ್ನು ನೀಗಬಲ್ಲವು, ಅರಿವನ್ನು ದೊರಕಿಸಬಲ್ಲವು
ಧೈರ್ಯ ತುಂಬಬಲ್ಲವು, ದಾರಿತೋರಬಲ್ಲವು
ಹುರುಪು ಹುಟ್ಟಿಸಬಲ್ಲವು, ನಕ್ಕು ನಲಿಸ ಬಲ್ಲವು,
ಸುಭಾಷಿತಗಳು, ನಾಡ ಹಾಡುಗಳು, ಗಾದೆಯಮಾತುಗಳು,
ಹಳೆಯವು, ಹೊಸದು, ಪ್ರಾಚೀನ, ಅರ್ವಾಚೀನ,
ಹಂದುವು, ಯಾರೂ ತೆರೆಯದವು, ಓಲೆಹೋದುವು,
ರಟ್ಟುಕೆಟ್ಟವು, ಹೊಲಿಗೆ ಸಡಿಲಿದುವು, ಆದ್ಯಂತ ರಹಿತವಾದುವು,
—ಹೀಗೆ ಹತ್ತಾರು ಬಗೆಯವು ನನ್ನ ಸುತ್ತುಮುತ್ತಿವೆ.

"ಭಟ್ಟ ! ನಿನಗೇಕಯ್ಯ ಈ ಪುಸ್ತಕಗಳ ಹೊರೆ ?
ಇದಕ್ಕೆ ಹಾಕುವ ಹಣವನ್ನು ಬಟ್ಟೆಗೋ
ಹೊಟ್ಟೆಗೋ, ಮೆಟ್ಟಿಗೋ ಹಾಕಬಾರದೇ ?"–
ಎಂದು ನನ್ನನ್ನು ಕೆಲ ನರಕುರಿಗಳು ಪ್ರಶ್ನಿಸಿವೆ.

ಸಂತೋಷ ಸಂಗ್ರಹಿಸಲು ಪುಸ್ತಕ ಸಂಗ್ರಹಿಸಬೇಕಂತೆ !
ಪುಸ್ತಕದ ವಿಷಯ ಮಸ್ತಕಕ್ಕೇರಲಿ, ಹೊಸಹೊಸ
ಪುಸ್ತಕಗಳ ಮೆರವಣಿಗೆ ನನ್ನ ಮನೆಯತ್ತ ನಿರಂತರ ಬರಲಿ,
ಕಾವ್ಯಶಾಸ್ತ್ರವಿನೋದ ನನಗೆ ಸದಾಸಿಗುತ್ತಿರಲಿ,
ಪುಸ್ತಕದ ದುಬಾರಿಬೆಲೆ ತಗ್ಗಿ, ಓದುಗ ಪುಸ್ತಕ ಪ್ರೇಮಿಯ
ಕೈಗೆ ಸದಾ ನಿಲುಕುವಂತಾಗಲಿ ; ಪುಸ್ತಕವನ್ನು ಕೊಂಡು ಓದಿ
ಕೊಂಡಾಡುವಂತಾಗಲಿ, ಹಾಗೆ ಶಾರದಾಂಬೆ ಸದಾ ಹರಸಲಿ.

- ವಿದ್ವಾನ್ ಕೆ. ಸುಬ್ರಹ್ಮಣ್ಯ ಭಟ್ಟ

ಶ್ರೀಯನಾಯುವ ಬಲವ
ಜಯವ ಬೇಡಿರ್ದೊಡಂ |
ಗಾಯತ್ರಿಯನೆ ಪರಮ
ಮಂತ್ರವೆಂದಾರ್ಯರ್ ||
ಧೀಯಂ ಪ್ರಚೋದಿಸೆಂದನು
ದಿನದಿ ಬೇಡಿದರು |
ಶ್ರೇಯಸ್ಸು ಧೀಮಹಿಮೆ
ಮಂಕುತಿಮ್ಮ ||
( ಮಂಕುತಿಮ್ಮನ ಕಗ್ಗದಿಂದ )

ಸಂಪತ್ತು, ಆಯುಸ್ಸು, ಬಲ, ಜಯ ಮುಂತಾದವುಗಳನ್ನೂ ಮೀರಿದ ಶ್ರೇಯಸ್ಸು ಧೀ – ಎಂದರೆ ಬುದ್ಧಿಶಕ್ತಿಯ ಮಹಿಮೆಯಿಂದ ಸಾಧ್ಯವಾಗುತ್ತದೆ.

ಪಾಶ್ಚಾತ್ಯರು ಹೊರಗಿನ ಪ್ರಪಂಚದ ವಿವಿಧ ಆಶ್ಚರ್ಯಗಳನ್ನು ಕಂಡು ಹಿಡಿಯುತ್ತ, ಬಾಹ್ಯೇಂದ್ರಿಯಗಳಿಂದ ಅವರು ಆನಂದವನ್ನು ಅನುಭವಿಸಿದರೆ, ನಾವು ನಿರಂತರವೂ ಅಂತರಂಗದ ಆಳಕ್ಕಿಳಿದು ನಮ್ಮದೇ ಆದ ಆತ್ಮಾನಂದವನ್ನು ಅನುಭವಿಸುತ್ತೇವೆ. ಆತ್ಮನಲ್ಲಿ ಅನಂತಶಕ್ತಿ ಅಡಗಿದೆ. ಈ ಶಕ್ತಿ ಪ್ರಥಮವಾಗಿ ಶಬ್ದರೂಪದಲ್ಲಿ ಪ್ರಕಟವಾಯಿತು. ಅದೇ ನಾದಬ್ರಹ್ಮ, ಅದೇ ಓಂ. ಈ ಭಾವದ ಶಾಬ್ದಿಕ ಸ್ವರೂಪಗಳೇ ವೇದದಲ್ಲಿನ ಪ್ರತಿಯೊಂದು ಮಂತ್ರವೂ. ಇಂಥ ಮಂತ್ರಗಳಲೆಲ್ಲ ಗಾಯತ್ರಿಯು ಅತ್ಯಂತ ಶ್ರೇಷ್ಠವಾದುದು. ಇದರ ನಿತ್ಯ ಪಠನವು ಹಿಂದೂ ಸಮಾಜದ ಪ್ರತಿಯೊಬ್ಬನಿಗೂ ಅತ್ಯವಶ್ಯ. ಹಿಂದುವಿನ ಜೀವನನಲ್ಲಿ ಗಾಯತ್ರಿ ಮಂತ್ರೋಪದೇಶವು ಅಧ್ಯಾತ್ಮ ಜೀವನದ ನಾಂದಿಯಾಗಿದೆ.

ಸರ್ವಶಕ್ತಿ ಪರಾಶಕ್ತಿಯನ್ನು ಕುರಿತು ದಿವ್ಯ ಬೆಳಕಿಗಾಗಿ ಪ್ರಾರ್ಥಿಸಿಕೊಂಡ ಪ್ರಾರ್ಥನೆ ಹೀಗಿದೆ –

ಮುಕ್ತಾವಿದ್ರುಮ ಹೇಮ ನೀಲ
ಧವಳಚ್ಛಾಯೈರ್ಮುಖೈಸ್ತ್ರೀಕ್ಷಣೈಃ |
ಯುಕ್ತಾಮಿಂದು ನಿಬದ್ಧ ರತ್ನ
ಮಕುಟಾಂ ತತ್ತ್ವಾರ್ಥ
ವರ್ಣಾತ್ಮಿಕಾಂ |
ಗಾಯತ್ರೀಂ ವರದಾಭಯಾಂಕುಶ
ಕಶಾಂ ಶೂಲಂ ಕಪಾಲಂ ಗದಾಂ |
ಶಂಖಂ ಚಕ್ರಮಥಾರವಿಂದ
ಯುಗಳಂ ಹಸ್ತೈರ್ವಹಂತೀಂ ಭಜೇ ||

ಮುತ್ತು ಹವಳ ಸ್ಫಟಿಕಗಳ ಕಾಂತಿಯಂತೆ ಮುಖವುಳ್ಳ, ಮೂರುಕಣ್ಣುಗಳುಳ್ಳ, ಚಂದ್ರನಿಂದ ಕೂಡಿದ, ರತ್ನ ಖಚಿತವಾದ ಕಿರಿಟಗಳುಳ್ಳ, ತತ್ತ್ವಾರ್ಥ ಪ್ರತಿಪಾದಿಸುವ ಅಕ್ಷರರೂಪಳಾಗಿರುವ ಅಂಕುಶ, ಕಶಾ, ಶೂಲ, ಕಪಾಲ, ಗದಾ, ಶಂಖ, ಚಕ್ರ ಮತ್ತು ಕಮಲದ ಮೊಗ್ಗುಗಳನ್ನು ಹಿಡಿದಿರುವ, ವರವನ್ನು ಅಭಯವನ್ನು ದಯಪಾಲಿಸುವ ಹಸ್ತಗಳನ್ನುಳ್ಳ ಗಾಯತ್ರೀ ದೇವಿಯನ್ನು ಧ್ಯಾನಿಸುತ್ತೇನೆ.

ಗಾಯತ್ರಿಯು ವೇದಗಳ 'ಮಹಾಮಾತೆ' 'ಸವಿತಾ' ಗಾಯತ್ರಿ ಮಂತ್ರದ ಅಧಿದೇವತೆ.




# ಮಹಿಮೆ

ಅಗ್ನಿಯೇ ಮುಖ. ವಿಶ್ವಾಮಿತ್ರನೇ ಋಷಿ. ಗಾಯತ್ರಿಯೇ ಛಂದಸ್ಸು. ಗಾಯತ್ರಿ ಹೇಳುತ್ತಿರುವ ಸೂರ್ಯ – ಈ ನಮ್ಮ ಕಣ್ಣಿಗೆ ಕಾಣುವ ಭೌತಿಕ ಸೂರ್ಯನಲ್ಲ. ಅದು ಮಹಾ ಪ್ರಕಾಶ. ಈ ಮಹಾ ಪ್ರಕಾಶ–ಇಹದ ಸೂರ್ಯ–ಚಂದ್ರಾದಿಗಳಿಗೂ ಬೆಳಕನ್ನು ನೀಡುವ ದಿವ್ಯಜ್ಯೋತಿ. ಅದೇ 'ಸವಿತಾ'. ಯಾವುದೇ ಸತ್ಯಶೋಧಕನಿಗೂ ಯಾವುದೇ ಜಾತಿ, ಮತ, ಪಂಥ ವರ್ಣದವನಿರಲಿ, ಗಾಯತ್ರಿಯು ಆಶ್ರಯ ಸ್ಥಾನ ನೀಡುತ್ತದೆ.

'ಅ' ( ಸ್ಥೂಲಪ್ರಪಂಚ ) 'ಉ' (ಆಕಾಶ) 'ಮ' (ಗಾಢನಿದ್ರಾ ಸ್ಥಿತಿ) ಎಂಬಮೂರಕ್ಷರಗಳನ್ನು ಬ್ರಹ್ಮನು ಮೂರು ವೇದಗಳಿಂದ ಕ್ಷೀರವನ್ನು ಹೀರಿದಂತೆ ಹೀರಿ, ಅವುಗಳಿಂದ ತ್ರಯಾತ್ಮಕವಾದ ಏಕಾಕ್ಷರವನ್ನು ರಚಿಸಿದನು. ಅದೇ 'ಓಂ' ಶಬ್ದ. ಈ 'ಓಂ' ಶಬ್ದವನ್ನನುಸರಿಸಿ ಬಂದ ಮೂರು ಶಬ್ದಗಳು ಮುಂದಿನ ಮೂರು ಪಾದಗಳುಳ್ಳ ಗಾಯತ್ರಿಯು, ವೇದದ ಪ್ರಮುಖ ಭಾಗವೆಂದು ಪರಿಗಣಿಸಲ್ಪಡುತ್ತದೆ.

**ಮತ್ತೀಗೆರೆ ಅನಂತು**

ಪ್ರಣವಮಂತ್ರ ಮೂರು ಪಾದಗಳಲ್ಲಿದೆ. ಮೊದಲನೆಯ ಪಾದವಾದ ( ಸಪ್ತವ್ಯಾಹೃತಿಗಳು ಹಾಗೂ ವೀಣೆಯ ಸಪ್ತಸ್ವರಗಳು ) "ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ" ಎಂಬುವು ಉಪಾಸಕನ ಮನಸ್ಸು, ಇಂದ್ರಿಯ ಮತ್ತು ಪಂಚಪ್ರಾಣಗಳು. ಕ್ರಮವಾಗಿ

ಭೂ – ಭೂತತತ್ತ್ವ –
ಮೂಲಾಧಾರಚಕ್ರ – 'ನಿ'
ಭುವಃ – ಜಲತತ್ತ್ವ –
ಸ್ವಾಧಿಷ್ಠಾನಚಕ್ರ – 'ದ'
ಸುವಃ – ಅಗ್ನಿ ತತ್ತ್ವ – ಮಣಿಪೂರಚಕ್ರ –
'ಪ'
ಮಹಃ – ವಾಯುತತ್ತ್ವ – ಅನಾಹತಚಕ್ರ
'ಮ'
ಜನಃ – ಆಕಾಶತತ್ತ್ವ–ವಿಶುದ್ಧಚಕ್ರ – 'ಗ'
ತಪಃ – ಅಂತಃಕರಣತತ್ತ್ವ –
ಆಜ್ಞಾಚಕ್ರ 'ದಿ'
ಸತ್ಯಂ – ಪರಬ್ರಹ್ಮತತ್ತ್ವ –
ಸಹಸ್ರಾರಕಮಲ – 'ಸ'

ಎಂಬ ಪರಬ್ರಹ್ಮ ತತ್ತ್ವದ ಲೋಕದಲ್ಲಿ ಲೀನವಾಗಬೇಕೆಂದು ತಿಳಿಸುತ್ತದೆ.

ಎರಡನೆಯ ಪಾದವು ಗಾಯತ್ರಿ ವರದೇವತಾಮಂತ್ರವೆಂದು ಪ್ರಸಿದ್ಧವಾಗಿರುವುದು.

'ತತ್ ಸವಿತುರ್‌ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ
ಧಿಯೋ ಯೋ ನಃ
ಪ್ರಚೋದಯಾತ್ ||'

ಸೃಷ್ಟಿಕರ್ತನೂ ಸರ್ವಾಂತರ್ಯಾಮಿಯೂ ಆದ ಪೂಜನೀಯ ದೇವನ ದಿವ್ಯಪ್ರಭೆಯನ್ನು ಧ್ಯಾನಿಸುತ್ತೇನೆ.

ಪ್ರಣವಮಂತ್ರದ ಮೂರನೆಯ ಪಾದ ವಾದ ( ಪಂಚಭೂತ )

" ಓಂ ಮಾಪೋ ಜ್ಯೋತಿರಸೋ ।
ಅಮೃತಂ ಬ್ರಹ್ಮಾಭೂರ್ಭುವಸ್ಸುವರೋಂ'

ಧ್ಯಾನ ಮಾಡುವವನು ಪಂಚಭೂತ ಗಳಾದ ಭೂಮಿ, ಜಲ, ತೇಜಸ್ಸು, ವಾಯು, ಆಕಾಶ ತತ್ತ್ವಗಳನ್ನು ದಾಟಿ ತೇಜಸ್ತತ್ವದಿಂದಲೇ ಧ್ಯಾನಮಾಡುತ್ತಾ ಮೋಕ್ಷ ಪಡೆಯ ಬೇಕೆಂದು ತಿಳಿಸುತ್ತದೆ.

ಫಲಸಿದ್ಧಿ – ಎಲ್ಲ ದೇವತೆಗಳನ್ನು ಪ್ರತ್ಯೇಕವಾಗಿ ಉಪಾಸನೆಮಾಡುವುದರಿಂದ ಬರಬಹುದಾದ ಪುಣ್ಯವಿಶೇಷಗಳೆಲ್ಲವೂ ಗಾಯತ್ರೀ ಉಪಾಸನೆಯೊಂದರಿಂದಲೇ ಸಾಧ್ಯವಾಗುವುದು. ಇದರಿಂದ ಎಲ್ಲ ದೇವತೆ ಗಳೂ, ಋಷಿಗಳೂ ಸಂತುಷ್ಟರಾಗುವರು. ಉಪಾಸಕನಿಗೆ ಅಜ್ಞಾನದಿಂದಾಗಲೀ ದುಷ್ಟಗ್ರಹ ಬಾಧೆಯಿಂದಾಗಲೀ, ದುರಾಲೋಚನೆ ಮಾಡಿದ್ದರಿಂದಾಗಲೀ, ಎಲ್ಲ ಬಗೆಯ ದೋಷಗಳೂ ನಿವಾರಣೆಯಾಗು ವುದು, ಹಾಗೆಯೇ ಉಪಾಸಕನು ಮುಂದೆ ಆರೋಗ್ಯ, ಐಶ್ವರ್ಯ, ಧನ, ವಿದ್ಯೆ, ಕೀರ್ತಿ, ಸೌಭಾಗ್ಯ, ತೇಜಸ್ಸು, ಒಳ್ಳೆಯ ಸಂತಾನ, ಶಾಂತಿ, ಮತ್ತು ಸಕಲ ಸೌಖ್ಯಗಳನ್ನು ಅನುಭವಿಸಿ ಕೊನೆಗೆ ಮೋಕ್ಷವನ್ನು ಪಡೆಯುವನು.

ಮನಸ್ಸಿಗೆ ಮೂರು ದೋಷಗಳುಂಟು. 1) ಅಶುದ್ಧತೆ, 2) ಚಂಚಲತೆ 3) ಅಜ್ಞಾನದ ಆವರಣ, ಈ ದೋಷಗಳಿಂದ ಪರಿಶುದ್ಧಿ ಹೊಂದಬೇಕಾದರೆ ಗಾಯತ್ರಿ ಜಪವನ್ನು ನಿತ್ಯವೂ ಅರ್ಥಸಮೇತ ಪಠಿಸುವುದು ಕ್ಷೇಮ-

ಗಾಯತ್ರಿ ಸಾಧನೆಗೆ ನೆರವಾಗುವ ಕೆಲವು ಸೂಚನೆಗಳನ್ನು ಅವಲೋಕಿಸೋಣ. ನಿಶ್ಚಿತಕಾಲ ( ಸಂಧ್ಯಾಕಾಲ ) ರಾತ್ರಿ– ಮುಂಜಾವು, ಮಧ್ಯಾಹ್ನ ಅಪರಾಹ್ನ, ಸಂಜೆ–ರಾತ್ರಿಗಳ ಸಂಗಮ ಕಾಲ; ನಿರ್ದಿಷ್ಟ ಸ್ಥಳ, ಸ್ಥಿರ ಆಸನ ( ಮುಖ ಉತ್ತರ ಅಥವ ಪೂರ್ವಕ್ಕೆ ) ; ಸ್ಪಷ್ಟಉಚ್ಚಾರಣೆ- ಪ್ರಾರ್ಥನೆ; ಆಸನ ; ಚಾಪೆ ಕಂಬಳಿಗಳನ್ನು ಉಪಯೋಗಿಸುವುದರಿಂದ ದೇಹದ ಶಕ್ತಿ– ( ವಿದ್ಯುತ್ ) ರಕ್ಷಿಸಲ್ಪಡುವುದು. ಜಾಗ ರೂಕತೆ; ಧ್ಯಾನ ( ಮಾನಸಿಕವಾಗಿ ) ; ವಿಶ್ರಾಂತಿ ; ಜಪ ಮುಗಿದ ಮೇಲೆ ತಕ್ಷಣ ಸ್ಥಳವನ್ನು ಬಿಡದೆ, ಕೆಲ ನಿಮಿಷಗಳ ಕಾಲ ಶಾಂತವಾಗಿ ಯಾವುದಾದರೊಂದು ಪ್ರಾರ್ಥನೆ ಹಾಡುವುದು ಒಳ್ಳೆಯದು.

ದಿವ್ಯಮಾತೆ ಗಾಯತ್ರಿಯು ನಮ್ಮೆಲ್ಲರಿಗೆ ಸಮ್ಯಕ್‌ಜ್ಞಾನ, ಪರಿಶುದ್ಧ ಬುದ್ಧಿ, ಸದ್ವರ್ತನೆ, ಸದ್ವಿಚಾರಗಳನ್ನಿ ನೀಡಲಿ ! ನಮ್ಮ ಕಾಯಕವೆಲ್ಲಾ ಆ ದಿವ್ಯ ಮಂತ್ರದ ಮಾರ್ಗ ದರ್ಶನ ಪಡೆಯಲಿ ! !

ಹರಿ ಓಂ ತತ್ಸತ್ ! !

---

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡ ಲಾಗಿದೆ. ಟಿಕೆಟ್ಟಿಗೆ ರೂ. 100/-- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಯುವವಾಣಿ

# ವಿದ್ಯೆ - ವಿನಯ

ವಿದ್ಯೆ ಮತ್ತು ವಿನಯಗಳು ಒಂದು ನಾಣ್ಯದ ಎರಡು ಮುಖಗಳು. ಎಲ್ಲಿ ವಿದ್ಯೆಯಿದೆಯೋ ಅಲ್ಲಿ ವಿನಯವು ಮೂಡಿ ಬರುತ್ತದೆ. ಹಾಗೆಯೇ ವಿನಯವಿದ್ದಲ್ಲಿ ವಿದ್ಯೆಯು ತಾನಾಗಿಯೇ ಬರುತ್ತದೆ. ಹೀಗೆ ವಿದ್ಯೆ ಮತ್ತು ವಿನಯಗಳು ಒಂದಕ್ಕೊಂದು ಪೂರಕವಾಗಿವೆ.

'ಸಾ ವಿದ್ಯಾಯಾ ವಿಮುಕ್ತಯೇ' ಯಾವುದು ವಿಮುಕ್ತಿಯನ್ನು ಸಾಧಿಸುತ್ತದೆಯೋ ಅದೇ ವಿದ್ಯೆ. ವಿಮುಕ್ತಿ ಎಂದರೆ ಕೇವಲ ಸಂಸಾರಚಕ್ರದಿಂದ ಹೊರಬರುವುದು ಮಾತ್ರವಲ್ಲ; ಸಂಸಾರದಲ್ಲಿದ್ದುಕೊಂಡು ಪಡೆಯುವ ಪೂರ್ಣ ಸ್ವಾತಂತ್ರ್ಯ-ವಿದ್ಯೆಯು ಅಜ್ಞಾನವೆಂಬ ಕತ್ತಲಿನಿಂದ ಜ್ಞಾನ ಎಂಬ ಬೆಳಕಿನೆಡೆಗೆ ಒಯ್ಯುತ್ತದೆ. ಹೀಗೆ ವಿದ್ಯೆ ಇಹ ಪರಗಳಲ್ಲಿಯೂ ವಿಮುಕ್ತಿಯನ್ನು ಸಾಧಿಸುತ್ತದೆ.

'ವಿದ್ಯಾ ವಿಹೀನಃ ಪಶುಃ' ಎಂಬ ಮಾತು ಸಂಸ್ಕೃತದಲ್ಲಿ ಪ್ರಚಲಿತವಾಗಿದೆ. ಯಾವನಿಗೆ ವಿದ್ಯೆ ಇಲ್ಲವೊ ಆತನು ಪಶುವಿಗೆ ಸಮಾನನು. ಅವನಿಗೆ ಈ ಸಮಾಜದಲ್ಲಿ ಯಾವ ಸ್ಥಾನಮಾನಗಳೂ ಇಲ್ಲ. ಜನತಾ ಕವಿ, ತ್ರಿಪದಿಯ ತ್ರಿವಿಕ್ರಮ ಸರ್ವಜ್ಞನು 'ವಿದ್ಯೆಯುಳ್ಳನ ಮುಖವು ಮುದ್ದು ಬರುವಂತಿಕ್ಕು । ವಿದ್ಯೆಯಿಲ್ಲದನ ಬರಿ ಮುಖವು ಹಾಳೂರ ಹದ್ದಿನಂತಕ್ಕು' ಎಂದು ವಿದ್ಯಾವಂತನ ತೇಜಸ್ಸನ್ನು ಬಹಳವಾಗಿ ಕೊಂಡಾಡಿದ್ದಾನೆ.

ವಿದ್ಯೆಯ ಮಹಿಮೆ ಬಹಳ ದೊಡ್ಡದು. ಐಶ್ವರ್ಯವಂತನ ಹಣವನ್ನು ಕಳ್ಳರು ಕದಿಯಬಹುದು; ದರೋಡೆಕೋರರು ಸುಲಿಗೆ ಮಾಡಿ ದೋಚಿಕೊಳ್ಳಬಹುದು. ಆದರೆ ವಿದ್ಯಾವಂತನ ವಿದ್ಯೆಯನ್ನು ಯಾವ ಕಳ್ಳನಿಗೂ ಕದಿಯಲು ಸಾಧ್ಯವಿಲ್ಲ; ಯಾವ ದರೋಡೆಕೋರನಿಗೂ ಸುಲಿಗೆ ಮಾಡಿ ವಿದ್ಯೆ ಪಡೆಯಲು ಸಾಧ್ಯವಿಲ್ಲ; ಸಂಪತ್ತನ್ನು ವೆಚ್ಚ ಮಾಡಿದಂತೆಲ್ಲಾ ಕಡಿಮೆಯಾಗುತ್ತ ಬರುತ್ತದೆ. ಆದರೆ ವಿದ್ಯೆಯನ್ನು ವಿನಿಯೋಗಿಸಿದಂತೆ ಜ್ಞಾನಸಂಪತ್ತು ಹೆಚ್ಚುತ್ತಾ ಬರುತ್ತದೆ. ಆದ್ದರಿಂದ 'ವಿದ್ಯಾಧನಂ ಸರ್ವಧನ ಪ್ರಧಾನಂ'. ಅನ್ನದಾನದಿಂದ ಕ್ಷಣಿಕತೃಪ್ತಿ ದೊರಕುತ್ತದೆ. ಆದರೆ ವಿದ್ಯಾದಾನದಿಂದ ಜೀವನವಿಡೀ ತೃಪ್ತಿ ದೊರೆಯುತ್ತದೆ. ಹೀಗೆ ಅನ್ನದಾನಕ್ಕಿಂತಲು ವಿದ್ಯಾದಾನ ಮಿಗಿಲೆನಿಸಿದೆ.

ವಿದ್ಯೆಗೆ ಎಲ್ಲರೂ ಗೌರವವನ್ನು ನೀಡುತ್ತಾರೆ. ರಾಜನಿಗೆ ತನ್ನ ರಾಜ್ಯದಲ್ಲಿ ಮಾತ್ರ ಗೌರವ ಸಿಗಬಹುದು. ಆದರೆ ವಿದ್ಯಾವಂತನಿಗೆ ದೇಶದ ಎಲ್ಲೆಡೆಯುಲ್ಲೂ ಗೌರವ ಪುರಸ್ಕಾರಗಳು ದೊರೆಯುತ್ತವೆ. ಹೀಗೆ ಪರನಾಡಿನಲ್ಲಿ ವಿದ್ಯೆಯೇ ಸಂಪತ್ತಾಗಿದೆ.

ವಿನಯವು ಹೇಡಿಯ ಅಸ್ತ್ರವಲ್ಲ; ಅದು ಬಲಶಾಲಿಯ ಆಯುಧ. ವಿನಯದಿಂದ ಎಂತಹ ಅದ್ಭುತ ಕಾರ್ಯಗಳನ್ನೂ ಸಾಧಿಸಬಹುದು. ಭಗವಾನ್ ಬುದ್ಧನು ದರೋಡೆಕೋರನಾದ ಅಂಗುಲಿಮಾಲನೊಡನೆ ವಿನಯದಿಂದಲೇ ಮಾತನಾಡಿದನು. ಬುದ್ಧದೇವನ ವಿನಯಪೂರಿತ ನುಡಿಗಳನ್ನು ಕೇಳಿ ಅಂಗುಲಿಮಾಲನ ಕಟುಹೃದಯ ಕರಗಿತು; ಕೊನೆಗೆ ಆತನು ಬುದ್ಧನ ಹಿಂಬಾಲಕನಾದನು.

ವಿನಯದಿಂದ ಹಟಮಾರಿ ಬಾಲಕರನ್ನೂ ಕ್ರೂರಮೃಗಗಳನ್ನೂ ಒಲಿಸಿಕೊಳ್ಳಬಹುದು. 'ಬಿಲ್ಲಾಗಿರಲು ಬೇಕು ಬಲ್ಲವರೊಳಗೆ' ಎಂದು ಪುರಂದರದಾಸರು ಬಲ್ಲವರೊಡನೆ ಹೇಗೆ ವರ್ತಿಸಬೇಕೆಂದು ಹೇಳಿದ್ದಾರೆ. ಮಂಕುತಿಮ್ಮನ ಕಗ್ಗವನ್ನು ಬರೆದ ಡಿ. ವಿ. ಜಿ. ಯವರು 'ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು' ಎಂದು ವಿನಯದಿಂದಲೇ ಮಾತನಾಡಲು ತಿಳಿಸಿದ್ದಾರೆ.

ತೋರಿಕೆಯ ವಿನಯದಿಂದ ಏನೂ ಪ್ರಯೋಜನವಿಲ್ಲ. 'ಸದು ವಿನಯವೇ ಸದಾಶಿವನೊಲುಮೆ' ನಿಜವಾದ ವಿನಯವಿದ್ದರೆ ಸದಾಶಿವನು ಒಲಿಯುವನು ಎಂದು ಬಸವಣ್ಣ ಹೇಳಿದ್ದಾರೆ. 'ಗುರು ಪಾದಕೆರಗಿದರೆ ಶಿರಸು ತಾ ಮಣಿಯುಕ್ಕು' ಗುರುವಿನ ಪಾದಕ್ಕೆ ವಿನಯದಿಂದ ನಮಸ್ಕರಿಸಿದರೆ ತಲೆಯೇ ರತ್ನವಾಗುವುದು ಎಂದು ಸರ್ವಜ್ಞನು ವಿನಯದ ಹಿರಿಮೆಯನ್ನು ವ್ಯಕ್ತಪಡಿಸಿದ್ದಾನೆ.

ಬಲ್ಲವರು ವಿನಯದಿಂದಲೇ ಮಾತನಾಡುತ್ತಾರೆ. ಹರಿಶ್ಚಂದ್ರನು ಕಷ್ಟ ಸಂಧರ್ಭಗಳಲ್ಲೂ ವಿಶ್ವಾಮಿತ್ರನೊಡನೆ, 'ತಮ್ಮ ಕರುಣೆಯ ಕೂಸು'–'ಎನ್ನಿಂದ ಕಿರಿಯರಿಲ್ಲ' ಎಂದು ತನ್ನ ವಿನಯವನ್ನು ತೋರಿಸಿದ್ದಾನೆ. ಕುಮಾರವ್ಯಾಸನು ತನ್ನ 'ಕರ್ಣಾಟ ಭಾರತ

ಆದ್ದರಿಂದ ವಿದ್ಯೆಯನ್ನು ಕಲಿಯುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ.

ವಿದ್ಯೆಯೆಂದರೆ ಕೇವಲ ಮೆದುಳಿನಲ್ಲಿ ಶೇಖರಿಸಿದ ವಿಷಯ ಸಂಗ್ರಹವಲ್ಲ. ಅದನ್ನು ಅರ್ಥಮಾಡಿಕೊಂಡು, ಬೇಕಾದಾಗ ತನ್ನ ಜೀವನದಲ್ಲಿ ಉಪಯೋಗಿಸಿಕೊಳ್ಳಬೇಕು. ಸ್ವಾಮಿ ವಿವೇಕಾನಂದರು ವಿದ್ಯೆಯನ್ನು ಕುರಿತು, "ಕೇವಲ ವಿಷಯ ಸಂಗ್ರಹವೇ ವಿದ್ಯೆಯಾಗುತ್ತಿದ್ದರೆ ಪ್ರಪಂಚದ ಪುಸ್ತಕ ಭಂಡಾರಗಳೇ ಮಹಾಮುನಿಗಳಾಗುತ್ತಿದ್ದವು; ವಿಶ್ವಕೋಶಗಳೇ ಮಹಾಋಷಿಗಳಾಗುತ್ತಿದ್ದವು" ಎಂದಿದ್ದಾರೆ. ಆದ್ದರಿಂದ ವ್ಯಕ್ತಿಯ ಜೀವನವನ್ನು ಉತ್ತಮಗೊಳಿಸುವಂತಹ ವಿದ್ಯೆ ಬೇಕು. ವಿದ್ಯೆಯಿಂದ ವ್ಯಕ್ತಿಗೆ ತನ್ನ ಕಾಲ ಮೇಲೆ ನಿಲ್ಲುವಂತಾಗಬೇಕು. ವಿದ್ಯೆಯೊಡನೆ ಆತನು ತನ್ನ ನಡತೆಯನ್ನೂ ಬೆಳೆಸಿಕೊಳ್ಳಬೇಕು.

ಶ್ರೀ ಪಿ. ಎಸ್. ಮಂಜುನಾಥ

ಥಾಮಂಜರಿ'ಯ ಮೊದಲಲ್ಲಿ ತಾನು ೀವಲ ಲಿಪಿಗಾರನೆಂದು, ಗದುಗಿನ ವೀರ ಾರಾಯಣ ಸ್ವಾಮಿಯೇ ಕವಿಯೆಂದು ತನ್ನ ರಿಮೆಯನ್ನು ಮೆರೆದಿದ್ದಾನೆ. ಹರಿಶ್ಚಂದ್ರ, ರ್ವರಾಯ, ಬಸವಣ್ಣ ಮೊದಲಾದವರು ನಯದ ಪ್ರತಿಮೂರ್ತಿಗಳಾಗಿದ್ದಾರೆ.

'ವಿದ್ಯಾ ವಿನಯೇನ ಶೋಭತೇ' ದ್ಯೆಯು ವಿನಯದಿಂದ ಶೋಭಿಸುತ್ತದೆ. ಬ್ಬನು ವಿದ್ಯಾವಂತನಾದರೆ ಆತನಲ್ಲಿ ಾನು ತಿಳಿದವನು ಎಂಬ ಅಹಂಭಾವ ಇರ ಾರದು. 'ನಾನು' ಎಂಬ ಅಹಂಕಾರ ಂದ ಆತನು ವರ್ತಿಸಿದಲ್ಲಿ, ಅವನು ಪಡೆದ ದ್ಯೆ ನಿಜವಾದ ವಿದ್ಯೆಯಲ್ಲ. ಆದ್ದರಿಂದಲೇ 'ತುಂಬಿದ ಕೊಡ ತುಳುಕುವುದಿಲ್ಲ', 'ತೆನೆಯಿಂದ ಕೂಡಿದ ಪೈರು ಬಾಗುತ್ತದೆ' ಎಂಬ ಅಚ್ಚಗನ್ನಡದಗಾದೆಗಳು ಮನೆಮಾತಾಗಿ ಹೋಗಿವೆ.

'ವಿದ್ಯಾ ದದಾತಿ ವಿನಯಂ'. ವಿದ್ಯೆಯು ವಿನಯವನ್ನು ಕೊಡುತ್ತದೆ. ವಿನಯವು ಯೋಗ್ಯತೆಯನ್ನು ಉಂಟು ಮಾಡುತ್ತದೆ. ಯೋಗ್ಯತೆಯಿಂದ ಸಂಪತ್ತು ಕೂಡಿ ಬರುವುದು. ಸಂಪತ್ತು ಬಂದಾಗ ಜೀವನವು ಸುಖಮಯವಾಗುತ್ತದೆ. ಆದ್ದರಿಂದ ವಿದ್ಯೆ ಮತ್ತು ವಿನಯಗಳು ಜೀವನದ ಏಳಿಗೆಯ ಸೋಪಾನಗಳು ಎಂಬುದರಲ್ಲಿ ಸಂದೇಹವಿಲ್ಲ.

---

(8ನೇ ಪುಟದಿಂದ)

ಸ್ಪಷ್ಟ ಭಾಷ್ಯವಾಗಿವೆ. ಕೊನೆಯ ಶ್ಲೋಕದಲ್ಲಿ ಇವರು ತಮ್ಮ ತಾತಂದಿರಾದ ನಾಥಮುನಿಗಳ ಬಗ್ಗೆ ಹೇಳುತ್ತಾ ತಮ್ಮ ಕುಲ ಶೀಲಗಳನ್ನಾದರೂ ನೋಡಿ ತಮ್ಮ ನಡೆಯನ್ನು ವಿವೇಚಿಸದೇ ತಮ್ಮಲ್ಲಿ ಪ್ರಸನ್ನರಾಗಬೇಕೆಂದು ಹರಿಯನ್ನು ಬೇಡುತ್ತಾರೆ. ಇವರ ಅರವತ್ತೈದು ಶ್ಲೋಕಗಳೂ ಅಣಿಮುತ್ತುಗಳು, ಭಾವರಸ ಪ್ರತಿಪಾದನೆಗಳು. ಯಾಮುನರು ತೋರಿದ ಭಕ್ತಿ, ಪ್ರೇಮ, ಉತ್ಕಟವಾದ ಈಶಾನುರಾಗ ನಮ್ಮನ್ನು ಈಗಲೂ ಭಕ್ತಿ ಮಾರ್ಗಕ್ಕೆ ಕರೆದೊಯ್ಯುತ್ತದೆ. ಅಂತಹ ಯಾಮುನರಿಗೆ ಆಳವಂದಾರ್ರಿಗೆ ನಮಸ್ಕಾರಗಳು.

★

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿವೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್. ಶ್ರೀಕಂಠಯ್ಯ
ಶ್ರೀನಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125, 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್‌ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸಿ. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್‌ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟ್ಯಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್ಸ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಕಟ್ಟಿ,
ಉಪ್ಪಳ ಬುರುಜು ಹಿಂಭಾರದಗಸ್ತೆ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
C/o ಡಿ.ಎಸ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ,
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಿಕರ್ತರು.ಓಲ್ಡ್‌ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್
ವಿನಾಯಕ ಟೈಲರ್ಸ್,ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ,ಆಪ,ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟ್ಯಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎಸ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎಸ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ ಸಾರಂಗಪಾಣಿ. ರೋಜರ್ಸ್ ಕ್ಯಾಂಪ್
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

★

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಅತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ವೆಲ್‌ಫೇರ್ ಆಫೀಸರ್. ತಿ.ತಿ.ದೇ. ತಿರುಪತಿ.**

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ವಾರ್ತಾವಳಿ

## ಕಾಲುಹಾದಿಯಲ್ಲಿ ವ್ಯವಸ್ಥಿತ ಮೆಟ್ಟಿಲುಗಳ ನಿರ್ಮಾಣ

ಅಲಿಪಿರಿಯಿಂದ ತಿರುಮಲೆ ಬೆಟ್ಟಕ್ಕೆ ನಡೆದು ಹೋಗುವ ಮಾರ್ಗದಲ್ಲಿ ಗಾಳಿಗೋಪುರದಿಂದ ಶ್ರೀ ನರಸಿಂಹಸ್ವಾಮಿ ದೇವಾಲಯದವರೆಗೆ 54 ಲಕ್ಷ ರೂಗಳ ವೆಚ್ಚದಲ್ಲಿ ವ್ಯವಸ್ಥಿತವಾದ ಕಲ್ಲಿನ ಮೆಟ್ಟಿಲುಗಳನ್ನು ಹಾಕಲು ನಿರ್ಣಯಿಸಲಾಗಿದೆಯೆಂದು ತಿ. ತಿ. ದೇವಸ್ಥಾನಗಳ ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರು ತಿಳಿಸಿದ್ದಾರೆ.

ಈಚೆಗೆ ಆಡಳಿತ ನಿರ್ವಾಹಕ ಮಂಡಳಿಯವರು ತೆಗೆದುಕೊಂಡ ನಿರ್ಣಯದಂತೆ ಈ ಕೆಲಸವನ್ನು ಅತಿ ತ್ವರೆಯಲ್ಲಿಯೇ ಆರಂಭಿಸಲಾಗುವುದೆಂದು ಅವರು ತಿಳಿಸಿದರು. ತಿರುಮಲೆಯ ಯಾತ್ರಿಕರು ಈ ಹಾದಿಯಲ್ಲಿ ನಡೆಯುವಾಗ ಏರುಪೇರುಗಳ ಕಲ್ಲುಹಾಸಿನ ದಾರಿಯಲ್ಲಿ ತೊಂದರೆಗೊಳಗಾಗುತ್ತಿದ್ದರೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ.

ಬೇಸಗೆಯಲ್ಲಿನ ತಿರುಮಲೆ ಯಾತ್ರಿಕರ ಸಂದಣಿಯ ಹೆಚ್ಚಳವನ್ನು ಗಮನಿಸುತ್ತ, ತಿರುಮಲೆಯಲ್ಲಿನ 'ನಿತ್ಯ ಅನ್ನದಾನಯೋಜನೆ' ಯಲ್ಲಿ ಉಚಿತ ಭೋಜನಾವಕಾಶವನ್ನು 2500 ಮಂದಿಯಿಂದ 5000 ಮಂದಿಗೆ ವಿಸ್ತರಿಸಲಾಗಿದೆಯೆಂದೂ ಅವರು ತಿಳಿಸಿದರು.

ಬೋರ್ಡ್ ಅಧ್ಯಕ್ಷರು ಮುಂದುವರಿದು ಮಾತನಾಡುತ್ತ ತಿರುಪತಿಯ ಎಸ್.ವಿ. ಶಿಲ್ಪಕಲಾಶಾಲೆಯನ್ನು ಮಹಾಬಲಿಪುರದ ಸರ್ಕಾರಿ ವಾಸ್ತುಶಿಲ್ಪ ಕಲಾಶಾಲೆಯಂತೆಯೇ ಅಭಿವೃದ್ಧಿಗೊಳಿಸಿ ಮುಂದಿನ ಶೈಕ್ಷಣಿಕ ವರ್ಷದಿಂದ ದೇವಾಲಯ ವಾಸ್ತು – ಶಿಲ್ಪಶಾಸ್ತ್ರದಲ್ಲಿ ಐದು ವರ್ಷಗಳ ಡಿಪ್ಲೋಮಾ ತರಗತಿಗಳನ್ನು ಆರಂಭಿಸಲಾಗುವುದೆಂದು ನುಡಿದರು.

## ರಕ್ತದಾನಿಗಳಿಗೆ ವಿಶೇಷದರ್ಶನ

ತಿರುಮಲೆಯ ರಕ್ತನಿಧಿಕೇಂದ್ರದಲ್ಲಿ ರಕ್ತದಾನ ಮಾಡುವ ಭಕ್ತರು ವಿಶೇಷ ಪ್ರವೇಶದ ಸಾಲಿನಲ್ಲಿ ನಡೆದು ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನವನ್ನು ಪಡೆಯಬಹುದು. ತಿರುಮಲೆಯಲ್ಲಿ ರಕ್ತನಿಧಿ ಕೇಂದ್ರವನ್ನು ಆರಂಭಿಸುವುದರ ಮೂಲಕ ಹೆಚ್ಚಿನ ಜನರ ಜೀವವನ್ನು ಉಳಿಸಿ, ಹಲವಾರು ಶಸ್ತ್ರಚಿಕಿತ್ಸೆಗಳಲ್ಲಿ ಅಗತ್ಯವಾದ ನೆರವನ್ನು ನೀಡುವ ತಿ. ತಿ. ದೇ. ಗಳ ಯೋಜನೆಯನ್ನು ಇಲ್ಲಿ ನೆನೆಯಬಹುದು.

## ಸರಿಪಲ್ಲಿಯಲ್ಲಿ ತಿ. ತಿ. ದೇ. ಕಲ್ಯಾಣಮಂಟಪ

ಪಶ್ಚಿಮಗೋದಾವರಿ ಜಿಲ್ಲೆಯ ಗಣಪವರಂನ ಬಳಿಯ ಸರಿಪಲ್ಲಿಯಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ ನಿರ್ಮಾಣವಾಗುತ್ತಿದೆ

ಅಲ್ಲಿನ ಶ್ರೀ ಸೀತಾರಾಮಸ್ವಾಮಿ ದೇವಾಲಯದ ಆಭರಣಗಳು, ಬೆಳ್ಳಿಯ ಪಾತ್ರೆಗಳನ್ನು ಈಚೆಗೆ ತಿ. ತಿ. ದೇವಸ್ಥಾನಗಳ ವಶಕ್ಕೆ ಒಪ್ಪಿಸಲಾಗಿದೆ. ತಿ. ತಿ. ದೇ. ಗಳೇ ಈ ದೇವಾಲಯದ ನಿತ್ಯಸೇವೆಗಳ ವೆಚ್ಚವನ್ನು ನಿಭಾಯಿಸುತ್ತಿರುವುದರಿಂದ ಸರಿಪಲ್ಲಿಯ ಶ್ರೀ ಸೀತಾರಾಮಸ್ವಾಮಿ ದೇವಾಲಯದ ಮ್ಯಾನೇಜಿಂಗ್ ಟ್ರಸ್ಟಿಯವರಿಗೆ ಯಾರೂ ಯಾವುದೇ ರೀತಿಯ ಕಾಣಿಕೆಯನ್ನೂ ಕಳುಹಿಸಬೇಕಾದ ಅಗತ್ಯವಿಲ್ಲವೆಂದು ಹೇಳಲಾಗಿದೆ.

## ಹಿಂದೂ ಧರ್ಮದ ಬಗ್ಗೆ ಬೇಸಿಗೆಯ ಶಿಕ್ಷಣ ಶಿಬಿರ

ಹಿಂದೂ ಧರ್ಮ ರಕ್ಷಣ ಸಂಸ್ಥೆಯವರು ಈ ಬೇಸಿಗೆಯಲ್ಲಿ ಹಿಂದೂ ಧರ್ಮದ ಬಗ್ಗೆ ಒಂದು ತಿಂಗಳ ಶಿಕ್ಷಣ ಶಿಬಿರವನ್ನು ನಡೆಸಿದರು. ಮೇ ಐದರಂದು ನಡೆದ ಶಿಬಿರದ ಉದ್ಘಾಟನೆಯಲ್ಲಿ ತಿ. ತಿ. ದೇ. ಬೋರ್ಡ್ ಸದಸ್ಯರುಗಳಾದ ಶ್ರೀ ಪಿ. ವೆಂಕಟೇಶ್ವರುಲು ಹಾಗೂ ಶ್ರೀ ನರಸಿಂಗ ನಾಯಕ್ ಭಾಗವಹಿಸಿ ಮಾತನಾಡಿದರು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಶಿಬಿರದ ಉದ್ಘಾಟನೆ ಮಾಡಿದರು.

ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್. ಲಕ್ಷ್ಮಣಯ್ಯ ಅವರು ಶಿಬಿರದ ಧ್ಯೇಯಧೋರಣೆಗಳು – ಪ್ರಾಮುಖ್ಯವನ್ನು ವಿವರಿಸಿದರು. ಶಿಬಿರದಲ್ಲಿ ಭಾಗವಹಿಸಿದ ನೂರಕ್ಕೂ ಮಿಕ್ಕ ಶಿಕ್ಷಣಾರ್ಥಿಗಳು ಇದರ ಫಲ ಪಡೆದು ಹಿಂದೂ ಧರ್ಮದ ಧಾರ್ಮಿಕ ಮಾನವಿಕ ಮೌಲ್ಯಗಳನ್ನು ಹರಡುವಂತೆ ಆಗಲಿ ಎಂದು ಹಾರೈಸಿದರು.

ಶಿಬಿರದಲ್ಲಿ ದೇವಾಲಯಗಳಲ್ಲಿನ ನಿತ್ಯಸೇವೆಗಳ ಬಗ್ಗೆಯೂ, ದೈನಂದಿನ ಜೀವನದ ಧಾರ್ಮಿಕತೆಯ ಬಗ್ಗೆಯೂ ಶಿಕ್ಷಣ ನೀಡಿ, ಗೀತೆಯ ಬಗ್ಗೆ ವಿಪುಲವಾದ ಮಾಹಿತಿಯನ್ನು ಒದಗಿಸಲಾಯಿತು. ದಿನವೂ ಅನ್ನಮಾಚಾರ್ಯ ಕೃತಿಗಳ, ಹರಿದಾಸರ ಕೃತಿಗಳ ಗಾಯನ, ಹರಿಕಥೆ, ಚಲನಚಿತ್ರ ಪ್ರದರ್ಶನ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿದ್ದವು. ಪ್ರತಿದಿನ ಮುಂಜಾನೆ ಯೋಗಶಿಕ್ಷಣವನ್ನೂ, ಕರಬೇತಿಯನ್ನೂ ನೀಡಲಾಯಿತು.

ಹಿಂದೂ ಧರ್ಮದಲ್ಲಿ ಹರಿಕಥೆಯು ಅತ್ಯುತ್ತಮ ಪ್ರಸಾರಮಾಧ್ಯಮವಾದದ್ದರಿಂದ ಹರಿದಾಸರನ್ನು ವಿಶೇಷವಾಗಿ ಆಹ್ವಾನಿಸಲಾಗಿದ್ದಿತು. ಶಿಕ್ಷಣಾರ್ಥಿಗಳಲ್ಲಿ ಹರಿಕಥೆಗೆ ಅವಕಾಶ ನೀಡಿ ಅವರ ಪ್ರತಿಭಾ ವಿಕಸನಕ್ಕೆ ಅವಕಾಶ ಮಾಡಿಕೊಡಲಾಯಿತು.

ಧಾರ್ಮಿಕ ಶಿಕ್ಷಣವನ್ನು ಪಡೆಯಬಂದ ಎಲ್ಲ ಶಿಕ್ಷಣಾರ್ಥಿಗಳಿಗೆ ತಿ. ತಿ. ದೇ. ಉಚಿತ ವಸತಿ ಭೋಜನ ವ್ಯವಸ್ಥೆಯನ್ನು ಏರ್ಪಡಿಸಿದ್ದಿತು.

## ತಿ. ತಿ. ದೇ. ಬೋರ್ಡ್‌ನ ಹೊಸಸದಸ್ಯರ ಪ್ರಮಾಣ ವಚನ ಸ್ವೀಕಾರ

ಈಚೆಗೆ ಆಂಧ್ರಪ್ರದೇಶ ಸರ್ಕಾರ ತಿ. ತಿ. ದೇ. ಟ್ರಸ್ಟ್ ಬೋರ್ಡ್‌ಗೆ ನಾಮಕರಣ ಮಾಡಿದ ಹೊಸ ಸದಸ್ಯರಾದ ಶಾಸನಸಭಾಸದಸ್ಯ ಶ್ರೀ ಆರ್. ಸತ್ಯನಾರಾಯಣ ಅವರು ಮೇ 18 ರಂದು ಬೋರ್ಡ್ ಸದಸ್ಯರಾಗಿ ಪ್ರಮಾಣವಚನ ಸ್ವೀಕರಿಸಿದರು. ಈ ಪ್ರಮಾಣ ಸ್ವೀಕಾರೋತ್ಸವ ಸಮಾರಂಭ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ನೇತೃತ್ವದಲ್ಲಿ ನಡೆಯಿತು.

## ತಿರುಮಲೆಗೆ ಮಲೇಶಿಯಾ ಮಂತ್ರಿ

ಮಲೇಶಿಯಾ ದೇಶದ ಗೃಹನಿರ್ಮಾಣ ಹಾಗೂ ಸಾಧಾರಣ ಪರಿಪಾಲನಾ ಶಾಖಾ ಮಂತ್ರಿ ಶ್ರೀ ಸುಬ್ರಹ್ಮಣ್ಯಂ ಅವರು ತಿರುಮಲೆಗೆ ಆಗಮಿಸಿ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಅವರನ್ನು ದೇವಾಲಯದ ಪೇಷ್ಕಾರ್ ಶ್ರೀ ಪಟ್ಟಾಭಿರೆಡ್ಡಿ ಸ್ವಾಗತಿಸಿದರು. ಸ್ವಾಮಿ ದರ್ಶನಾನಂತರ ಶ್ರೀಯುತರು ಮದರಾಸಿಗೆ ತೆರಳಿದರು. ★

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ ಆಗಸ್ಟ್ — 1985**

**ಪ್ರಭಾವೀ ಕರ್ನಾಟಕ**
– ಆದ್ಯ ರಾಮಾಚಾರ್ಯ

**ಮಹಾಲಕ್ಷ್ಮೀ**
– ರಘುಸುತ

**ವೇದ ವಾಙ್ಮಯ**
– ಡಾ॥ ಎಸ್. ಅನಂತರಂಗಾಚಾರ್

**ಶಬ್ದ ಪ್ರಮಾಣ**
– ಡಿ. ಕೃಷ್ಣ ಅಯ್ಯಂಗಾರ್

**ಶ್ರೀ ವ್ಯಾಸ ತತ್ತ್ವಜ್ಞರು**
– ಬಿ. ಸತ್ಯನಾರಾಯಣಾಚಾರ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ 1985

| | | |
|---|---|---|
| 15 | ಗುರುವಾರ | ಚಕ್ರತ್ತಾಳ್ವಾರ್ ವರ್ಷ ತಿರುನಕ್ಷತ್ರ. ಭಾರತ ಸ್ವಾತಂತ್ರ್ಯ ದಿನೋತ್ಸವ. |
| 17 | ಶನಿವಾರ | ಸಿಂಹ ಸಂಕ್ರಮಣ. |
| 20 | ಮಂಗಳವಾರ | ಮಂಗಳಗೌರೀ ವ್ರತ. |
| 21 | ಬುಧವಾರ | ಕಲ್ಕಿಜಯಂತಿ. |
| 23 | ಶುಕ್ರವಾರ | ವರಲಕ್ಷ್ಮೀವ್ರತ. |
| 26 | ಸೋಮವಾರ | ತಿರುಮಲೆಯಲ್ಲಿ ಪವಿತ್ರೋತ್ಸವ. |
| 28 | ಬುಧವಾರ | ಋಗ್ವೇದ ಉಪಾಕರ್ಮ. |
| 30 | ಶುಕ್ರವಾರ | ಶ್ರೀ ವೈಖಾನಸ ಮಹರ್ಷಿ ಜಯಂತಿ. |
| 31 | ಶನಿವಾರ | ಗಾಯತ್ರೀ ಜಪ. |

# ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.



ಶ್ರೀ ವಿ. ಕೆ. ಡಿ. ವಿ. ಎಸ್. ರಾಜು

# ಸಂಗೀತೋತ್ಸವದಲ್ಲಿ ರಾಜ್ಯಪಾಲರಿಂದ ಸನ್ಮಾನಿತರು




ಶ್ರೀ ಪಿ. ಯಾದಗಿರಿ



ಶ್ರೀ ಎಸ್. ಲಕ್ಷ್ಮೀನಾರಾಯಣ



ಶ್ರೀ ಕೃಷ್ಣಸ್ವಾಮಿ



ಶ್ರೀ ಕೆ. ಕೃಷ್ಣಮೂರ್ತಿ



ಸಮಾರೋಪ ಸಮಾರಂಭ

ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು



ಶ್ರೀ ಡಿ. ಪಶುಪತಿ

